# ಬಾಲ ರಾಮಾಯಣ

## ಯುದ್ಧಕಾಂಡ (ಉತ್ತರ ಭಾಗ)



ನಾರಾಯಣರಾವ
ತಾಳಿಕೋಟಿ

# ಬಾಲ ರಾಮಾಯಣ

(ಯುದ್ಧಕಾಂಡ-ಉತ್ತರಭಾಗ)

ಸಂಪುಟ : ೫

ಲೇಖಕ :

ನಾರಾಯಣರಾವ ತಾಳೀಕೋಟಿ

ರಾಯಚೂರು

ಪ್ರಕಾಶಕರು :

ಶ್ರೀರಾಮ ಸೇವಾ ಟ್ರಸ್ಟ್, ರಾಯಚೂರು

ಧಾರ್ಮಿಕ ಗ್ರಂಥ ಪ್ರಕಾಶನ ವಿಭಾಗ

ಶ್ರೀರಾಮ ಸೇವಾ ಟ್ರಸ್ಟಿನ
ಆರನೆಯ ಕುಸುಮ

ಪ್ರಥಮ ಮುದ್ರಣ : ೧೯೭೯
(೧೦೦೦ ಪ್ರತಿಗಳು)

ಸರ್ವಾಧಿಕಾರ ಲೇಖಕರದು

ಬೆಲೆ ರೂ. ೬-೦೦

ಮುಖಪುಟ : ಜಿ. ಕೆ. ಮೂರ್ತಿ, ಧಾರವಾಡ

ಪ್ರಕಾಶಕರು : ಶ್ರೀರಾಮ ಸೇವಾ ಟ್ರಸ್ಟ್, ರಾಯಚೂರು
(ಧಾರ್ಮಿಕ ಗ್ರಂಥ ಪ್ರಕಾಶನ ವಿಭಾಗ)

ಮುದ್ರಕರು : ಪ್ರತಿಭಾ ಮುದ್ರಣ, ಧಾರವಾಡ.

# ಪ್ರಕಾಶಕರ ನುಡಿ

ಆದಿಕವಿ ವಾಲ್ಮೀಕಿ ಮಹರ್ಷಿಗಳ ರಾಮಾಯಣವು ಭಾರತೀಯ ಜೀವನದ ಒಂದು ಭಾಗವಾಗಿದೆ. ಸಹೃದಯ ಓದುಗರ ಹೃನ್ಮನಗಳನ್ನು ತಣಿಸಿದೆ. ಭಾರತೀಯ ಸಂಸ್ಕೃತಿಗೆ ಕನ್ನಡಿಯನ್ನು ಹಿಡಿದು ಭಾರತದ ಹಿರಿಮೆಯನ್ನು ತೋರಿಸಿದೆ. ಆದರೆ ಸಂಸ್ಕೃತವನ್ನು ಬಲ್ಲ ಪಂಡಿತರಿಗೆ ಮಾತ್ರ ಅದನ್ನು ಓದಲು ಅನುಕೂಲವಾಯಿತು.

ಕನ್ನಡಿಗರಿಗೂ ಈ ಮಹಾಕವಿಯ ದರ್ಶನವಾಗಬೇಕೆಂಬ ಇಚ್ಛೆಯಿಂದ ಕನ್ನಡದ ಕವಿಗಳನೇಕರು ರಾಮಾಯಣಗಳನ್ನು ರಚಿಸಿದರು. ತಮಗೆ ಯೋಗ್ಯ ಕಂಡ ರೀತಿಗಳಲ್ಲಿ ಮಾರ್ಪಾಡುಗಳನ್ನು ಮಾಡಿಕೊಂಡರು. ಇವೂ ಕೂಡ ಸಾಮಾನ್ಯ ಕನ್ನಡಿಗನಿಗೆ ಅರ್ಥವಾಗದಷ್ಟು ಕ್ಲಿಷ್ಟವಾಗಿದೆ.

ಜನಸಾಮಾನ್ಯರಿಗೆ ವಿಶೇಷವಾಗಿ ಬಾಲಕ-ಬಾಲಕಿಯರಿಗೆ ತಾವೇ ಓದಿಕೊಂಡು ಹಾಡಲು ಅನುಕೂಲವಾಗಲೆಂದು, ಶ್ರೀ ನಾರಾಯಣರಾವ ತಾಳೀಕೋಟೆ ಇವರು ಪ್ರಸ್ತುತ ಬಾಲರಾಮಾಯಣವನ್ನು ಆದಿಕವಿಯ ಮಾರ್ಗವನ್ನೇ ಹಿಡಿದು ಸ್ವತಂತ್ರವಾದ ಕೃತಿಯನ್ನು ರಚಿಸಿದ್ದಾರೆ. ಸುಲಲಿತವಾದ ಸರಳ ಭಾಷೆಯಲ್ಲಿ ಬರೆದ ಚತುಷ್ಪದಿಗಳು ಸಾಮಾನ್ಯನಿಗೂ ರಾಮಾಯಣದ ಸಾರಸರ್ವಸ್ವವನ್ನು ನೀಡಬಲ್ಲವು.

ಈ ಲೇಖಕರ ಕನ್ನಡ "ಶ್ರೀ ಭಗವದ್ಗೀತೆ"ಯು ಪ್ರಪ್ರಥಮವಾಗಿ ನಮ್ಮ ಪ್ರಕಾಶನ ವಿಭಾಗದಿಂದ ಈಗಾಗಲೇ ಪ್ರಕಾಶಿತವಾಗಿದೆ. ಅದಕ್ಕೆ ಎಲ್ಲ ಕಡೆಯಿಂದಲೂ ಒಳ್ಳೆಯ ಪ್ರತಿಕ್ರಿಯೆ ಬಂದಿದೆ.

ಬಾಲರಾಮಾಯಣದ ಈ ನಾಲ್ಕನೆಯ ಸಂಪುಟಕ್ಕಾಗಿ ಫರೂಕ ಅನ್ವರ ಕಂಪನಿಯ ಒಡೆಯರಾದ ಶ್ರೀ ಗಫಾರ ಶೇಠರು ಉದಾರ ಧನ ಸಹಾಯ ಮಾಡಿದ ಕಾರಣ ಈ ಸಂಪುಟವು ಇಷ್ಟು ಶೀಘ್ರ ಹೊರಗೆ ಬರಲು ಅನುಕೂಲವಾಯಿತು. ಅವರಿಗೂ ಅಲ್ಲದೆ ನಮಗೆ ಪ್ರಕಟಿಸಲು ಅವಕಾಶ

ಇತ್ತ್ಯದಕ್ಕಾಗಿ ಲೇಖಕರಾದ ಶ್ರೀ ನಾರಾಯಣರಾವ ತಾಳಿಕೋಟಿ ಇವರಿಗೂ ನಮ್ಮ ಕೃತಜ್ಞತೆಗಳು. ಧಾರವಾಡದ ಪ್ರತಿಭಾ ಮುದ್ರಣಾಲಯದ ಒಡೆಯರಾದ ಶ್ರೀ ಘಾಣೇಕರರಿಗೂ ಧನ್ಯವಾದಗಳು.

ಬಾಲರಾಮಾಯಣದ ನಂತರ ಇದೇ ಲೇಖಕರು ಬರೆದ ಬಾಲಮಹಾಭಾರತವನ್ನು ಪ್ರಕಟಿಸುವ ವಿಚಾರವಿದೆ. ಆರ್ಥಿಕ ಅನುಕೂಲವಾದರೆ ಅದೂ ಸಾಧ್ಯವಾಗಬಹುದು.

ಎಂದಿನಂತೆ ಓದುಗರ, ಭಕ್ತರ, ಪ್ರೋತ್ಸಾಹವೇ ನಮ್ಮ ಬಲ. ನಮ್ಮ ಸೇವೆಯು ಅವರಿಗೆ ಮೀಸಲು. ಭಗವಂತನು ಎಲ್ಲರಿಗೂ ಕಲ್ಯಾಣ ಮಾಡಲಿ.

ರಾಯಚೂರು — ಡಾ. ಎ. ಶಂಕರ

ತಾ. ೨೫-೨-೭೯ — ಎಸ್. ಜಿ. ಲೋಖಂಡೆ, ಎಂಜಿನಿಯರ

ಮಹಾಶಿವರಾತ್ರಿ — ನಾರಾಯಣರಾವ ತಾಳಿಕೋಟಿ, ಎಡ್ವೋಕೇಟ

ಧರ್ಮದರ್ಶಿಗಳು

ಶ್ರೀರಾಮ ಸೇವಾ ಟ್ರಸ್ಟ್, ರಾಯಚೂರು

# ಲೇಖಕರ ನುಡಿ

ವಿಶ್ವದ ಆದಿಕವಿ ವಾಲ್ಮೀಕಿ ಮಹರ್ಷಿಯ ರಾಮಾಯಣ ಸಂತತ ಹರಿಯುವ ಅಮೃತಮಯ ಗಂಗಾಜಲ. ಅದನ್ನು ಎಷ್ಟೋ ಕವಿಗಳು ತಮ್ಮ ಯೋಗ್ಯತಾನುಸಾರ ಕುಡಿದಿದ್ದಾರೆ. ಇತರರಿಗೆ ಕುಡಿಸಿದ್ದಾರೆ. ನಾನೂ ನನ್ನ ಬೊಗಸೆಯಲ್ಲಿ ತುಂಬಿಕೊಂಡು ಕುಡಿದಿದ್ದೇನೆ, ತೃಪ್ತಿ ಪಟ್ಟಿದ್ದೇನೆ. ಸಂಸ್ಕೃತ ಅರಿಯದ ಮಕ್ಕಳಿಗೆ ಕುಡಿಸುವ ಪ್ರಯತ್ನಪಟ್ಟಿದ್ದೇನೆ. ಮಕ್ಕಳಿಗೆ ತೃಪ್ತಿಯಾದೀತೆಂದು ನಂಬಿದ್ದೇನೆ.

ಇದು ಅನುವಾದವಲ್ಲ, ಸ್ವತಂತ್ರ ಕೃತಿ.

ನನ್ನ "ಶ್ರೀಭಗವದ್ಗೀತೆ"ಯು ಶ್ರೀರಾಮ ಸೇವಾ ಟ್ರಸ್ಟಿನಿಂದ ಪ್ರಕಟವಾದ ಕೆಲವೇ ತಿಂಗಳುಗಳಲ್ಲಿ ಈ "ಬಾಲರಾಮಾಯಣ"ದ ಐದು ಸಂಪುಟಗಳು ಪ್ರಕಟವಾಗುತ್ತಿರುವದು ಒಂದು ಯೋಗಾಯೋಗವೆಂದೇ ಹೇಳಬಹುದು. ಇಷ್ಟು ತೀವ್ರ ಆರ್ಥಿಕ ಅನುಕೂಲತೆಯಾದೀತೆಂದು ಅನಿಸಿರಲಿಲ್ಲ. ಭಗವಂತನ ಕರುಣೆಯಿಂದ ಮಹಾದಾನಿಗಳು ಮುಂದೆ ಬಂದಿದ್ದಾರೆ. ಎಲ್ಲ ಮಹಾದಾನಿಗಳಿಗೂ ಅವರ ಸಹಾಯಕ್ಕಾಗಿ ಅತ್ಯಂತ ಕೃತಜ್ಞನು.

ಸಹ ಧರ್ಮದರ್ಶಿಗಳಾದ ಡಾ. ಎ. ಶಂಕರ ಹಾಗೂ ಶ್ರೀ ಎಸ್. ಜಿ. ಲೋಖಂಡೆ ಇವರ ಉತ್ಸಾಹ ಅದಮ್ಯವಾದುದು. ಅವರಿಬ್ಬರ ಸಹಕಾರ ಹಾಗೂ ಪ್ರಯತ್ನದ ಫಲವಾಗಿಯೇ ಬಾಲರಾಮಾಯಣವು ಇಷ್ಟು ತೀವ್ರ ಬೆಳಕು ಕಂಡಿದೆ. ಬರುವ ಶ್ರೀರಾಮ ನವಮಿಗೆ ಕೊನೆಯ ಸಂಪುಟವಾದ

ಉತ್ತರ ಕಾಂಡವನ್ನೂ ಪ್ರಕಟಿಸುವ ಯೋಜನೆ ಇದೆ. ದಾನಿಗಳು ಮುಂದೆ ಬರುವರೆಂದು ಆಶಿಸುತ್ತೇನೆ.

ಸುಂದರವಾಗಿ ಅಲ್ಪಾವಕಾಶದಲ್ಲಿ ಮುದ್ರಿಸಿದ ಶ್ರೀ ಘಾಣೇಕರರಿಗೂ ಕೃತಜ್ಞತೆಗಳು.

ರಾಯಚೂರು
ದಿ. ೨೫-೨-೭೯
ಮಹಾಶಿವರಾತ್ರಿ

ನಾರಾಯಣರಾವ ತಾಳೀಕೋಟಿ

# ಧರ್ಮಗ್ರಂಥ ಪ್ರಕಾಶನಕ್ಕೆ ಸಹಾಯ ಮಾಡಿದ ಮಹನೀಯರು

೨೦–೩–೭೮ ರಿಂದ ೩೧–೧೨–೭೮ರ ವರೆಗೆ

| | | |
|---|---|---|
| ೧. | ಶ್ರೀ ಯಾದಾಳಂ ಸುಬ್ಬಯ್ಯ ಶೆಟ್ಟಿ ಚಾರಿಟಿಬಲ್ ಟ್ರಸ್ಟ್, ಬೆಂಗಳೂರು | ೨೫೧—೦೦ |
| ೨. | ಶ್ರೀ ಶಂಕರ ದೀಕ್ಷಿತ ಕಲ್ಲುಗುಡಿ (ಗಂಗಾವತಿ) | ೫೧—೦೦ |
| ೩. | ಶ್ರೀ ಎಸ್. ಆರ್. ಕುಲಕರ್ಣಿ (ಮುಂಬಯಿ) | ೨೫—೦೦ |
| ೪. | ಇತರರು | ೨೫—೦೦ |
| | | ೩೫೨—೦೦ |

ಚಂದಾದಾರರು :

| | | |
|---|---|---|
| ೧. | ಶ್ರೀ ಪಿ. ಟಿ. ದೇಸಾಯಿ (ಧಾರವಾಡ) | ೪೫—೦೦ |
| ೨. | ಶ್ರೀ ದೋಮಕುಂಟೆ ನಾರಾಯಣಪ್ಪ, ರಾಯಚೂರು | ೪೫—೦೦ |
| | | ೪೪೨—೦೦ |

**ನಿವೇದನೆ :—**

ನಮ್ಮ ಪ್ರಕಾಶನ ವಿಭಾಗದಿಂದ ಹೊರಬಂದ 'ಶ್ರೀಭಗವದ್ಗೀತೆ' ಹಾಗೂ 'ಬಾಲರಾಮಾಯಣ'ದ ನಾಲ್ಕು ಸಂಪುಟಗಳಿಂದ ಓದುಗರು ಪರಿಚಿತರಾಗಿದ್ದಾರೆ. ಇದು ಐದನೆಯ ಸಂಪುಟ. ಕೊನೆಯ ಸಂಪುಟ ಇದೇ ವರ್ಷದಲ್ಲಿ ಶೀಘ್ರವಾಗಿ ಬರಲಿದೆ. ಅಲ್ಲದೆ ಇದರಂತೆಯೆ 'ಬಾಲ-ಮಹಾಭಾರತ'ವೂ ಅತಿ ಸರಳ ಶ್ಲೋಕಗಳಲ್ಲಿ ೧೩ ಸಂಪುಟಗಳಲ್ಲಿ ಬರಲಿದೆ. ತಮ್ಮೆಲ್ಲರ ಆರ್ಥಿಕ ಸಹಾಯಕ್ಕಾಗಿ ಕೋರುವೆವು.

| | | | | ಬೆಲೆ ರೂ. |
|---|---|---|---|---|
| | ಶ್ರೀ ಭಗವದ್ಗೀತೆ | | | ೬-೦೦ |
| ಸಂಪುಟ | | | | |
| ೧ | ಬಾಲರಾಮಾಯಣ | (ಬಾಲ-ಅಯೋಧ್ಯಾಕಾಂಡ) | " | ೮-೦೦ |
| ೨ | " | (ಅರಣ್ಯ-ಕಿಷ್ಕಿಂಧಾಕಾಂಡ) | " | ೮-೦೦ |
| ೩ | " | (ಸುಂದರಕಾಂಡ) | " | ೭-೦೦ |
| ೪ | " | (ಯುದ್ಧಕಾಂಡ-ಪೂರ್ವಭಾಗ) | " | ೭-೦೦ |
| ೫ | " | ( " ಉತ್ತರಭಾಗ) | " | ೮-೦೦ |
| ೬ | " | (ಉತ್ತರಕಾಂಡ) | " | ೮-೦೦ |
| | | | | ೫೨-೦೦ |

ಚಂದಾದಾರರಿಗೆ ಕೇವಲ ೪೫ ರೂಪಾಯಿಯಲ್ಲಿ ಕೊಡಲಾಗುವುದು.

ರೂ. ೧೦೧/- ಕೊಡುವವರು ಭಗವದ್ಗೀತೆ - ಬಾಲರಾಮಾಯಣ ಮಾಲೆಗೆ ದಾನಿಗಳೆಂದು ಪರಿಗಣಿಸಲಾಗುವದು. ರೂ. ೨೫೦೦/- ಕೊಡುವ ಮಹಾದಾನಿಗಳ ಇಲ್ಲವೆ ಅವರು ಇಷ್ಟಪಟ್ಟವರ ಭಾವಚಿತ್ರವನ್ನು ಕೃತಜ್ಞಾಪೂರ್ವಕವಾಗಿ ಒಂದು ಸಂಪುಟದಲ್ಲಿ ಹಾಕಲಾಗುವದು. ಕಾರಣ ಉದಾರ ದಾನಿಗಳು ಚಂದಾದಾರರಾಗಿ, ದಾನಿಗಳಾಗಿ, ಮಹಾದಾನಿಗಳಾಗಿ ಪ್ರೋತ್ಸಾಹಿಸಬೇಕಾಗಿ ಸವಿನಯ ವಿನಂತಿ.

ಸಹಾಯ ಮಾಡಿದ ಎಲ್ಲ ಮಹನೀಯರಿಗೆ ಮತ್ತು ಸಂಸ್ಥೆಗಳಿಗೆ ಹಾರ್ದಿಕ ಕೃತಜ್ಞತೆಗಳು. ತಮ್ಮ,

ಡಾ. ಎ. ಶಂಕರ

ಶ್ರೀನಿವಾಸರಾವ ಲೋಕಖಂಡೆ, ಎಂಜಿನಿಯರ್

ನಾರಾಯಣರಾವ ತಾಳಿಕೋಟಿ, ಎಡ್ವೋಕೇಟ

ಧರ್ಮದರ್ಶಿಗಳು

---

## ನಮ್ಮಿಂದ ಪ್ರಕಟವಾದ 'ಶ್ರೀ ಭಗವದ್ಗೀತೆಯು' ಬಗೆಗೆ ಬಂದ ಅಭಿಪ್ರಾಯಗಳು

ಭಗವದ್ಗೀತೆಯು ಹದಿನೆಂಟು ಅಧ್ಯಾಯಗಳ ೭೦೦ ಶ್ಲೋಕಗಳು ಸರಳ ಕನ್ನಡದಲ್ಲಿ ಜನಸಾಮಾನ್ಯರಿಗೂ ತಿಳಿಯುವ ಉದ್ದೇಶದಿಂದ ಈ ಅನುವಾದ ಮಾಡಲಾಗಿದೆ. ತಮ್ಮ ಉದ್ದೇಶದಲ್ಲಿ ಅನುವಾದಕರು ಸಫಲರೂ ಆಗಿದ್ದಾರೆ............ಸಣ್ಣವರೂ ಹಾಡುತ್ತ ಹಾಡುತ್ತ ಅರ್ಥಮಾಡಿಕೊಳ್ಳಬಹುದಾದ ರೀತಿಯಲ್ಲಿ ಲಲಿತವಾಗಿದೆ ಅನುವಾದ.

'ಉದಯವಾಣಿ' ದೈನಿಕ, ಮಂಗಳೂರು
೧೪-೧೧-೧೯೭೬ (ಶ್ರೀರಾಮಾನುಜ ಇವರಿಂದ)

ಸಂಸ್ಕೃತ ಭಾಷೆಯೇ ಬಾರದ ಜನತೆಗೆ ಕೇವಲ ಲಲಿತವಾದ ಹೊಸಗನ್ನಡ ಚೌಪದಿಗಳ ಮೂಲಕ ಮೂಲವನ್ನೆಷ್ಟರ ಮಟ್ಟಿಗೆ ಅಡಕವಾಗಿ ಹೇಳಬಹುದೋ ಅಷ್ಟರಮಟ್ಟಿಗೆ ಈ ಅನುವಾದಕರು ಹೇಳಹೊರಟು ಗಣನೀಯ ಯಶಸ್ಸನ್ನು ದೊರಕಿಸಿದ್ದಾರೆ. ಒಂದು ಸಾಲಿನಲ್ಲಿ ನಾಲ್ಕು ನಾಲ್ಕು ಮಾತ್ರೆಗಳ ಗಣಗಳಿರುವ ಛಂದಸ್ಸಿನ ಓಟ ಕನ್ನಡ ವಾಚಕರ ಕಿವಿಗೆ ಹಿತವಾಗಿದೆ.

'ಪ್ರಜಾವಾಣಿ' ದೈನಿಕ, ಬೆಂಗಳೂರು
೨೬-೧೨-೧೯೭೬ (ಡಾ. ಕೆ. ಕೃಷ್ಣಮೂರ್ತಿ ಇವರಿಂದ)

Your translation has brought out the spirit of the original. By translating the Geeta into Kannada that

too in the form of slokas you have done a great service to the Kannada speaking people.

ಮಾನ್ಯ ಶ್ರೀ ಕೆ. ಎಸ್. ಹೆಗಡೆ
ಸುಪ್ರೀಮ್ ಕೋರ್ಟಿನ ನಿವೃತ್ತ ನ್ಯಾಯಾಧೀಶರು
ಹಾಗೂ ಲೋಕಸಭೆಯ ಸ್ಪೀಕರ್

Your endeavour in this noble task will, I hope, be amply rewarded.

ಮಾನ್ಯ ಶ್ರೀ ಕೆ. ಜಗನ್ನಾಥ ಶೆಟ್ಟಿ
ಕರ್ನಾಟಕ ಹೈಕೋರ್ಟಿನ ನ್ಯಾಯಾಧೀಶರು

ಗೀತೆಯು ಜ್ಞಾನರೂಪಗ್ರಂಥ. ಸುಲಭ ಪದ್ಯಗಳಿಂದ ಜನಸಾಮಾನ್ಯರಿಗೆ ತಿಳಿಸುವ ಯತ್ನ ಯೋಗ್ಯವಾಗಿದೆ. ನಿಮ್ಮ ಶ್ರಮ ಸಫಲವಾಗಲೆಂದು ಹಾರೈಸುತ್ತೇನೆ.

ವೀರೇಂದ್ರ ಹೆಗ್ಗಡೆ, ಧರ್ಮಸ್ಥಳ

ಅನುವಾದವು ಸರಳವಾಗಿಯೂ, ಸುಲಲಿತವಾಗಿಯೂ ಆಗಿರುವದಲ್ಲದೆ ಮೂಲದ ಅರ್ಥಕ್ಕಾಗಲಿ, ಭಾವಕ್ಕಾಗಲಿ ಎಲ್ಲಿಯೂ ಚ್ಯುತಿ ಬಂದಿಲ್ಲ. ಸಾಂಗತ್ಯ ಧಾಟಿಯಲ್ಲಿ ಹಾಡಲೂ ಬಹುದು. ಓದುತ್ತ ಹೋದಂತೆ ಅರ್ಥವು ಸ್ಪಷ್ಟವಾಗುತ್ತ ಹೋಗುತ್ತದೆ. ಇದೊಂದು ವೈಶಿಷ್ಟ್ಯಪೂರ್ಣವಾದ ರಚನೆಯೆಂದು ನನ್ನ ಮತ.

ಶ್ರೀ ವೆಂಕಟರಾವ ನಾಯಕ
ನಿವೃತ್ತ ಜಿಲ್ಲಾ ಶಿಕ್ಷಣಾಧಿಕಾರಿಗಳು, ಕಲಬುರ್ಗಿ

ಗೀತೆಯ ಅನುವಾದದಲ್ಲಿ ನಿಮಗೆ ದೊರೆತ ಆನಂದದ ಒಂದಂಶವಾದರೂ ಇನ್ನೊಬ್ಬರಿಗೆ ತಲುಪುವದು.

ಡಾ. ವಿ. ಕೃ. ಗೋಕಾಕ
ಬೆಂಗಳೂರು ವಿಶ್ವವಿದ್ಯಾಲಯದ ನಿವೃತ್ತ ಉಪಕುಲಪತಿಗಳು
ಅಧ್ಯಕ್ಷ, ಜ್ಞಾನಪೀಠ ಅವಾರ್ಡ ಸಮಿತಿ

ಭಗವದ್ಗೀತೆಯಂತಹ ಅವಿರತ ಜ್ಞಾನಗಂಗೆಯು ನಿಮ್ಮೀ ಭಗೀರಥ ಪ್ರಯತ್ನದಿಂದ ಕನ್ನಡ ಭಾಷೆಯಲ್ಲಿ ಮೂಡಿ ಹರಿದು ಕನ್ನಡಿಗರೆಲ್ಲರ

ಹೃದಯಕಮಲಗಳನ್ನು ಮುಟ್ಟುವದೆಂಬ ಪೂರ್ಣ ಭರವಸೆ ನನಗಿದೆ.

ಪ್ರೊ. ರಮೇಶ ಬಿ. ಜೋಶಿ
ಅಕ್ಕಲಕೋಟ (ಮಹಾರಾಷ್ಟ್ರ)

ಸಾಮಾನ್ಯನಿಗೂ ಗೀತಾಮಾತೆಯನ್ನು ಅರ್ಥಮಾಡಿಕೊಡುವ ಈ ಪುಸ್ತಕದ ಶೈಲಿಯು ಮನಸ್ಸಿಗೆ ನೆಮ್ಮದಿಯನ್ನುಂಟು ಮಾಡಿದೆ.

ಪ್ರೊ. ವಸಂತ ಕುಷ್ಟಗಿ, ಶಹಾಬಾದ

ಪುಸ್ತಕವು ಬಹಿರಂಗ – ಅಂತರಂಗ ಸೌಂದರ್ಯದಿಂದ ಕೂಡಿದೆ. ಎಲ್ಲಕ್ಕೂ ಮಿಗಿಲಾದ ಸಾಧನೆಯೆಂದರೆ ಗಹನ ತಾತ್ವಿಕ ಶ್ಲೋಕಗಳ ಸುಲಿದ ಬಾಳೆಯ ಹಣ್ಣಿನಂತೆ ಇರುವ ಸರಳ ಕನ್ನಡ ಪದಗಳಲ್ಲಿ 'ಅನುವಾದ'.

ಪ್ರೊ ಕಮಲನಾಥ ಪಂಕಜ
ಆದವಾನಿ (ಆಂಧ್ರಪ್ರದೇಶ)

ಮೂಲಾರ್ಥಕ್ಕೆ ಚ್ಯುತಿ ಬಾರದಂತೆ ಗೀತೆಯನ್ನು ಸುಲಭವಾದ ಶೈಲಿಯುಲ್ಲಿ ಕನ್ನಡಕ್ಕೆ ಅನುವಾದ ಮಾಡಿದುದು ನಿಜಕ್ಕೂ ಎಲ್ಲರಿಗೂ ಉಪಕಾರಿಯಾಗಿದೆ.

ಶ್ರೀ ಮಾರ್ತಂಡ (ಅರವಿಂದ) ದೀಕ್ಷಿತರು
ಸಂಸ್ಕೃತ ವಿದ್ವನ್ಮಣಿಗಳು, ಹುಬ್ಬಳ್ಳಿ

ಶ್ರೀ ತಾಳೀಕೋಟೆ ನಾರಾಯಣರಾಯರ ಕುಂದಿಲ್ಲದ ಲೇಖನಿಯಿಂದ ಹೊರಹೊರಟ 'ಶ್ರೀಭಗವದ್ಗೀತೆ' ನಮಗಿರಲು, ಸಂಸ್ಕೃತದ ಹಂಗೇಕೆ? ಭ್ರಾಂತಿಯೇಕೆ ?

ಶ್ರೀ ಎನ್. ಎಸ್. ಅವಂತೀಕರ್
ಅಸಿಸ್ಟಂಟ್ ಎಂಜಿನಿಯರ್, ಬೀಳಗಿ

'ಶ್ರೀ ಭಗವದ್ಗೀತೆ'ಯ ಅನುವಾದ ಸರಳ ಹಾಗೂ ಸುಲಭ ಗ್ರಾಹ್ಯವಾಗುವ ರೀತಿಯಲ್ಲಿ ಅನುವಾದಿತವಾಗಿದೆ.

ಶ್ರೀ ರಮೇಶ ಪಾಟೀಲ
ಜ್ಯೂನಿಯರ್ ಎಂಜಿನಿಯರ್, ಗೋರೂರು

ಗೂಢವಾದ ಶ್ರೀ ಗೀತಾಮಾತೆಯ ತತ್ವವನ್ನು ಸಮಸ್ತರಿಗೂ ತಿಳಿಯುವಂತೆ, ಅರ್ಥವಾಗುವಂತೆ, ಭಗವಂತನು ನಿಮ್ಮಿಂದ ನುಡಿಯಿಸಿದ್ದಾನೆ.

ಶ್ರೀ ರಾ. ವಿ. ಕುಷ್ಟಗಿ
ನಿವೃತ್ತ ಲೇಖಕ ಶಿಕ್ಷಕರು, ಕಲಬುರ್ಗಿ

ತಿಳಿಗನ್ನಡದಲ್ಲಿ ಸುಲಭ ಶೈಲಿಯಲ್ಲಿ ಬರೆದಿರುವ ಭಗವದ್ಗೀತೆಯು ನನಗೆ ಬಹಳ ಮೆಚ್ಚಿಕೆಯಾಗಿರುವದು.

ಶ್ರೀ ಹನುಮಂತರಾವ ಪಾಟೀಲ, ಧಾಣಕಶಿರೂರು
ನಿವೃತ್ತ ಶಿಕ್ಷಕರು

This new turn in your life is really worthy of your knowledge and intelligence. Very much impressed by the simple & lucid style.

ಶ್ರೀ ಎನ್. ಎಸ್. ಜೋಶಿ, ಮುಂಬಯಿ
ಅಂಚೆಖಾತೆಯ ಅಧಿಕಾರಿಗಳು

ಓದುತ್ತ ಓದುತ್ತ ನನಗಾದ ಆನಂದ ಅವರ್ಣನೀಯ.....ತಾಯ್ನುಡಿಯಾದ ಕನ್ನಡದಲ್ಲಿ ಓದಿಕೊಳ್ಳುತ್ತಿದ್ದರೆ ಅರ್ಥವು ಸ್ಪಷ್ಟವಾಗಿ ಮನನಕ್ಕೆ ಸುಲಭವಾಗಿರುವದು........ಅನುವಾದವು ಪದ್ಯರೂಪದಲ್ಲಿರುವದರಿಂದ, ನಿತ್ಯ ಪಾರಾಯಣಕ್ಕೆ ಹಾಡಿಕೊಂಡು ಹೇಳಿಕೊಳ್ಳಲು ಬಹಳ ಪ್ರಶಸ್ತವಾಗಿದೆ.... ........ಜನಸಾಮಾನ್ಯರ ದೃಷ್ಟಿಯಿಂದ ತಮ್ಮ ಕೃತಿ ಮಹತ್ವಪೂರಿತವಾದುದು.

ಶ್ರೀ ಬಿ. ರಾಮಶೇಷ ಶರ್ಮ, ಸಾಗರ

ತಮ್ಮ ಭಗವದ್ಗೀತೆಯನ್ನು ಓದಿದ್ದೇನೆ. ತುಂಬಾ ಸಂತೋಷವನ್ನುಂಟು ಮಾಡಿತು. ನೀವು ಪಟ್ಟಿರುವ ಶ್ರಮ ಸಾರ್ಥಕವಾಯಿತು. ಈ ಮುಂದೆ ಸಂಸ್ಕೃತ ಮೂಲಗ್ರಂಥಗಳ ಅನುವಾದ ತಮ್ಮಿಂದ ಹೊರಬರಲೆಂದು ಭಗವಂತನಲ್ಲಿ ಪ್ರಾರ್ಥನೆ.

ಶ್ರೀ ಬಿ. ಎಲ್. ತಿಪ್ಪಾಚಾರಿ, ಚಳ್ಳಕೆರೆ

'ಶ್ರೀ ಭಗವದ್ಗೀತೆ'ಯು ಸರಳ ಕನ್ನಡದಲ್ಲಿ ಮತ್ತು ಸರಳ ಭಾಷೆಯಲ್ಲಿ ಅತ್ಯುತ್ತಮ ಕೃತಿಯಾಗಿದೆ.

ಶ್ರೀ ಎಸ್. ಆರ್. ಕುಲಕರ್ಣಿ
ನಿವೃತ್ತ ರೇಲ್ವೆ ಅಧಿಕಾರಿಗಳು, ಮುಂಬಯಿ

ಸಂಸ್ಕೃತ ತಿಳಿಯದ ಹೆಂಗಳೆಯರ ಅಂಧಃಕಾರವನ್ನು ಕಳೆದು ಬೆಳಗುವ ದಿವ್ಯ ಜ್ಯೋತಿಯಂತಿದೆ.

ಶ್ರೀಮತಿ ಲಕ್ಷ್ಮೀಬಾಯಿ ಕೋಡಿಹಾಳ
ಸೊಲ್ಲಾಪುರ

ಧರ್ಮವನ್ನು ಜನಸಾಮಾನ್ಯರ ಹೃದಯಕ್ಕೆ ತಲುಪಿಸುವ ನಿಮ್ಮ ನಿಷ್ಕಲ್ಮಷ ಭಾವನೆಗೆ ನಾನು ಶುಭ ಹಾರೈಸುತ್ತೇನೆ.

ಪ್ರೊ. ಶೇಷ ನವರತ್ನ
ರಿಸರ್ಚ್ ಸ್ಕಾಲರ್

## 'ಬಾಲರಾಮಾಯಣ'ದ ಮೊದಲಿನ ನಾಲ್ಕು ಸಂಪುಟಗಳಿಗೆ ಬಂದ ಅಭಿಪ್ರಾಯಗಳು

'ಸುಲಿದ ಬಾಳೆಯ ಹಣ್ಣಿನಂದದಿ' ಸುಲಲಿತವಾದ ಕನ್ನಡ ಚೌಪದಿಗಳಲ್ಲಿ ಭಗವದ್ಗೀತೆಯನ್ನು ಅಳವಡಿಸಿ ಗಣ್ಯರಾಗಿರುವ ಲೇಖಕರು ಇದೇ ಛಂದೋಗತಿಯಲ್ಲಿ ವಾಲ್ಮೀಕಿ ರಾಮಾಯಣದ ತಿರುಳನ್ನು ಪುನರ್ನಿರೂಪಿಸುವ ರಚನೆ ಈ "ಬಾಲರಾಮಾಯಣ". ಹೆಸರಿಗೆ ತಕ್ಕಂತೆ ಇದು ಮಕ್ಕಳ ಆಸಕ್ತಿಯನ್ನು ಕೆರಳಿಸಿ ಅವರಿಗೆ ರಾಮಾಯಣ ಕಥೆಯನ್ನು ಸರಳವಾಗಿಯೂ ಸರಸವಾಗಿಯೂ ಬಿಂಬಿಸಿ ಹೇಳಲು ಉಪಯುಕ್ತವಾಗಿದೆ. ಹಾಡಲು ಕೂಡಾ ಬರುವಂತಿದೆ.

ಮೂಲ ರಾಮಾಯಣದಲ್ಲಿ ಘಟನೆಗಳ ವೈವಿಧ್ಯವಿರುವಂತೆ ಬಾಹುಲ್ಯವೂ ಇದೆ. ವರ್ಣನೆಗಳ ಸೊಬಗೂ ಇದೆ. ಇದು ಮೂಲದ ಅನುವಾದವಾಗಿರದೆ ಮುಖ್ಯ ಘಟನೆಗಳನ್ನು ಮಾತ್ರ ಸಂಗ್ರಹವಾಗಿ ಹಾಗೂ ಸುಲಭವಾಗಿ ಹೇಳುವ ಪದ್ಯಕೃತಿಯಾಗಿದೆ. ಇದರಲ್ಲಿ ಪಾತ್ರಪೋಷಕ ವಿಸ್ತಾರಗಳೂ ವರ್ಣನಾಭಾಗಗಳೂ ಸಹಜವಾಗಿಯೇ ಹಿಂದಾಗುತ್ತವೆ. ಆದರೂ ಎಷ್ಟೊಂದು ತಿಳಿಯಾಗಿ ಕಿರಿಯದರಲ್ಲಿ ಹಿರಿಯ ಸಾರ್ಥಕ್ಯವನ್ನು ಲೇಖಕರು ತೋರಿಸಬಲ್ಲರೆಂಬುದಕ್ಕೆ ಯಾವ ಪುಟವನ್ನೇ ತೆಗೆದರೂ ನಿದರ್ಶನಗಳು ದೊರೆಯುತ್ತವೆ.

ಸುಖಾವಹವಾಗಿ ಹರಿಯುವ ಈ ಪದ್ಯಬಂಧದ ಓಘ ಎಳೆಯರ ಮನಸ್ಸನ್ನೆಳೆಯುವಲ್ಲಿ ಸಮರ್ಥವಾಗಿರುವಂತೆ ಕಥಾನಿರೂಪಣೆಯೂ ಸಾರವತ್ತಾ

ಗಿದೆ. ಇವರ ಯೋಜನೆ ಬೇಗ ಪೂರ್ಣವಾಗಿ ಮಿಕ್ಕ ಕಾಂಡಗಳೂ ಪ್ರಕಟವಾಗಲೆಂದು ಹಾರೈಸುತ್ತೇವೆ.

'ಪ್ರಜಾವಾಣಿ' ದೈನಿಕ, ಬೆಂಗಳೂರು
೨೪–೬–೭೭ (ಡಾ. ಕೆ. ಕೃಷ್ಣಮೂರ್ತಿ ಇವರಿಂದ)

"ಅವು (ಪದ್ಯಗಳು) ಸಂವಾದಾತ್ಮಕವಾಗಿದ್ದು. ಕಥೆಯ ಓಟಕ್ಕೆ ಸಹಾಯಕ"

'ವಿಕ್ರಮ' ಸಾಪ್ತಾಹಿಕ, ಬೆಂಗಳೂರು
(ತಾಳ್ತಜೆ ರಘುಪತಿ)

ಲಲಿತವಾದ ಪದ್ಯಗಳಲ್ಲಿ ಎಳೆಯರಿಗೂ ಅರಿವಾಗುವಂತೆ ಬರೆದ ಈ ಕನ್ನಡ ಬಾಲರಾಮಾಯಣ ಎಳೆಯರಂತೆ ದೊಡ್ಡವರಿಗೂ ವಾಚನೀಯ. ಸುಂದರವಾದ ಮುಖಚಿತ್ರ, ಸುಂದರವಾದ ಮುದ್ರಣ, ಸ್ವಾಗತಾರ್ಹವಾದ ಪ್ರಕಾಶನ.

'ಉದಯವಾಣಿ' ದೈನಿಕ, ಮಂಗಳೂರು
೧೫-೫-೭೭ (ಶ್ರೀ ಬನ್ನಂಜೆ ಇವರಿಂದ)

ಸಂಪೂರ್ಣ ಓದಿದೆ. ಆನಂದವಾಯಿತು. ಹಿಡಿದರೆ ಬಿಡಲಾರದಂಥ ಓಟವಿದೆ ಶೈಲಿಯಲ್ಲಿ. ಭಾಷೆ ಸರಳವಾಗಿದ್ದು ನಿರೂಪಣೆ ಆಕರ್ಷಕವಾಗಿದೆ.

ಶ್ರೀ ವೆಂಕಟರಾವ ನಾಯಕ, ಕಲಬುರ್ಗಿ
ನಿವೃತ್ತ ಜಿಲ್ಲಾಧಿಕಾರಿಗಳು

ನಿಮ್ಮ ಕವಿತಾಶಕ್ತಿಯು ಅಷ್ಟು ಸುಲಭವಾಗಿ ಧಾರಾಳವಾಗಿ ಹರಿಯುತ್ತಿರುವದು ಬಹಳ ಮೆಚ್ಚಬೇಕಾದ ವಿಷಯ–ನೀವು ಶ್ರೀರಾಮಚಂದ್ರನ ಕೃಪೆಗೆ ಪಾತ್ರರಾಗುವದು ಖಂಡಿತ.

ಶ್ರೀ ಕೋಟಿ ವಾಸುದೇವ ಕಾರಂತ, ಮಂಗಳೂರು
ನಿವೃತ್ತ ಎಂಜಿನಿಯರರು

ನಮ್ಮ ಪುರಾತನ ಕಥೆಗಳು ಅದೃಶ್ಯವಾಗುತ್ತಿರುವ ಈ ಕಾಲದಲ್ಲಿ ಸರಳ, ಒಮ್ಮೊಮ್ಮೆ ತೀರ ಸರಳ—ಕನ್ನಡದಲ್ಲಿ ಬರೆದ ರಾಮಾಯಣವನ್ನು ಬಾಲಕರೂ ಉಳಿದವರೂ ಓದಿ ಸಂತೋಷಿಸಲಿ.

ಶ್ರೀ ವಿ. ಕೃ. ಗೋಕಾಕ
ಬೆಂಗಳೂರು ವಿಶ್ವವಿದ್ಯಾಲಯದ ನಿವೃತ್ತ ಉಪಕುಲಪತಿಗಳು

It will be a good source of reading and assimilation of Hindu Culture ---I find it a treasure bank.

ಪ್ರೊ. ರಮೇಶ ಬ. ಜೋಶಿ
ಅಕ್ಕಲಕೋಟ (ಮಹಾರಾಷ್ಟ್ರ)

ಜನಸಾಮಾನ್ಯರಿಗೂ ತಿಳಿಯುವಂತೆ ಬರೆದಿರುವದು ವಿದ್ವತ್ಪೂರ್ಣ ಸಾಹಸದ ಕೆಲಸವಾಗಿದೆ.

ಶ್ರೀ ಹನುಮಂತರಾವ ಪಾಟೀಲ, ಧಾಣಕಶಿರೂರ
ನಿವೃತ್ತ ಶಿಕ್ಷಕರು

ಸರಳ ಕನ್ನಡದಲ್ಲಿ ಚುಟುಕ ಕವನಗಳಲ್ಲಿ ಶ್ರೀಮದ್ರಾಮಾಯಣದ ಸಾಹಿತ್ಯವು ರಸವತ್ತಾಗಿ, ಪ್ರಭಾವಿಯಾಗಿ ವ್ಯಕ್ತವಾಗಿದೆ. ತುಂಬ ಚೆನ್ನಾಗಿದೆ. ಮಕ್ಕಳು ಸಹ (ಅವರಿಗೆಂದೇ ಬರೆದುದು ಸಾರ್ಥಕ) ಸುಲಭವಾಗಿ ತಿಳಿದುಕೊಳ್ಳುವಂತಿದೆ.

ಶ್ರೀ ಸು. ನಾ. ಮಲ್ಯ, ಬೆಂಗಳೂರು
'ವಿಕ್ರಮ' ವಾರಪತ್ರಿಕೆಯ ಸಂಪಾದಕರು

ಕನ್ನಡಿಗರೇ ನಿಮಗೆ ಕೃತಜ್ಞರಾಗಿರಬೇಕು. ಇಂಥ ಕಾರ್ಯವನ್ನು ನಡೆಸಿರುವಿರಿ. ಭಗವಂತನು ನಿಮ್ಮನ್ನು ಅನುಗ್ರಹಿಸಲಿ.

ಶ್ರೀ ಎಚ್. ಜಿ. ಜೋಶಿ
ಧಾರವಾಡ ಟ್ರೇನಿಂಗ ಕಾಲೇಜದ ನಿವೃತ್ತ ಪ್ರಿನ್ಸಿಪಾಲರು

Hope your 'Tapasya' of writing Ramayana and Mahabharata two great epics of Hindu religion in poetry form is seeing success after success.

ಶ್ರೀ ಎ. ಎಸ್. ನಾರಾಯಣರಾವ
ಎಗ್ಜಿಕ್ಯೂಟಿವ್ಹ ಎಂಜಿನಿಯರ್, ಬೀಳಗಿ

ವರ್ಣನೆಗಳು ಮನೋರಂಜಕವಾಗಿವೆ. ಅಲ್ಲಲ್ಲಿ ರೂಪಕಗಳು ಕೃತಿಯಲ್ಲಿ ಜೀವ ತುಂಬಿದಂತಾಗಿವೆ. ಸರಸ್ವತಿ ನಿಮ್ಮ ಲೆಕ್ಕಣಿಕೆಯಲ್ಲಿ ಕುಣಿಯುತ್ತಿದ್ದಾಳೆಂದು ಅನಿಸುತ್ತದೆ. ನಿಮ್ಮ ಉಳಿದ ಸಂಪುಟಗಳು ಬೇಗನೆ ಹೊರಬೀಳಲಿ.

ನಮ್ಮ ಸಂಸ್ಕೃತಿಯನ್ನು ಪುನರುಜ್ಜೀವನಗೊಳಿಸುತ್ತಿರುವ ನೀವೆ ಧನ್ಯರು.

ಶ್ರೀ ವೆಂಕಟರಾವ ನಾಯಕ, ಕಲಬುರ್ಗಿ
ನಿವೃತ್ತ ಜಿಲ್ಲಾಧಿಕಾರಿಗಳು

This book is really excellant. It is composed in so simple and lucid style that it can be understood by any-body ---

The style and melody continue to be superb as usual and flow like Ganges on the plain.

ಶ್ರೀ ಎನ್. ಎಸ್ ಜೋಶಿ, ಮುಂಬಯಿ
ಅಂಚೆ ಅಧಿಕಾರಿಗಳು

Glad to learn new poetic implications of your trans-perant thoughts.

ಪ್ರೊ. ರಮೇಶ ಬಿ. ಜೋಶಿ
ಅಕ್ಕಲಕೋಟ (ಮಹಾರಾಷ್ಟ್ರ)

ಬರೆಯುವ ಶೈಲಿಯು ಸರಳವಾಗಿದ್ದು, ಆಕರ್ಷಕವಾಗಿದ್ದು, ಪಾಮರರಿಗೂ ತಿಳಿಯುವಂತಿದೆ.

ಶ್ರೀ ಶ್ರೀ. ರಾ ಕುಲಕರ್ಣಿ, ಬಾಗಲಕೋಟೆ

You have taken much pains in writing these two big epics in clear and understatandable Kannada language, which would de very useful to young boys.

ಶ್ರೀ ನೀಲಕಂಠಪ್ಪ ಬಣ್ಣದಭಾವಿ
ಜಿಲ್ಲಾ ಹಾಗೂ ಸೆಶನ್ಸ ನ್ಯಾಯಾಧೀಶರು

ಈ ಕೃತಿಯು 'ಬಾಲರಾಮಾಯಣ' ಎಂದು ಹೆಸರಾಂತುದು ತುಂಬ ಸಾರ್ಥಕವಾಗಿದೆ. ಶೈಲಿಯು ಅತ್ಯಂತ ಸರಳವಾಗಿದ್ದು, ಪ್ರಾಸದ ತ್ರಾಸ, ಅರ್ಥ ಚಮತ್ಕೃತಿ ಹಾಗೂ ಅಷ್ಟಾದಶ ವರ್ಣನೆಗಳ ಆವಾಂತರದಿಂದ ಮುಕ್ತವಾಗಿದೆ. ಆತಏವ ಬಾಲಕರೂ, ಹಳ್ಳಿಗರೂ, ಶ್ರೀ ಸಾಮಾನ್ಯರೂ

ಓದಿ ಸವಿಯಬಹುದಾಗಿದೆ   ಹಾಡಿಸಿ ಹಾಡಿ ಹರ್ಷಿಸಬಹುದಾಗಿದೆ.

ಜಯರಾವ ದೇಸಾಯಿ, ಓರಕುಂಟಿ
ನಿವೃತ್ತ ಪ್ರಾಚಾರ್ಯರು

ಜನಸಾಮಾನ್ಯರಿಗೆ, ವಿಶೇಷವಾಗಿ ಬಾಲ-ಬಾಲಕಿಯರಿಗೆ ತಾವೇ ಓದಿಕೊಂಡು ಹಾಡಲು ಅನುಕೂಲವಾಗುವಂತೆ ಕೃತಿ ರಚನೆ ಆಗಿದೆ. ತಾವು ಕೈಕೊಂಡಿರುವ ಸಾರ್ಥಕವಾದ ಪ್ರಯತ್ನದಲ್ಲಿ ತಮಗೆ ಇನ್ನೂ ಹೆಚ್ಚಿನ ಯಶಸ್ಸು ದೊರೆಯಲೆಂದು ಹಾರೈಸುತ್ತೇನೆ. ಸರಳ ಸುಂದರ ಚತುಷ್ಪದಿಗಳಲ್ಲಿ ತಾವು ರಾಮಾಯಣವನ್ನು ರಚಿಸಿ ಒಳ್ಳೆಯ ಕೆಲಸವನ್ನು ಮಾಡುತ್ತ ಬಂದಿದ್ದೀರಿ. ತಮ್ಮಿಂದ ಸಾಹಿತ್ಯ ಸೇವೆ ನಿರಂತರವಾಗಿ ನಡೆಯಲಿ.

ಜಿ. ನಾರಾಯಣ
ಅಧ್ಯಕ್ಷ, ಕನ್ನಡ ಸಾಹಿತ್ಯ ಪರಿಷತ್ತು

"ನಿಮ್ಮ ಸುಂದರ ಕಾಂಡದಲ್ಲಿ ಭಾವ ಪುಟಿಯುತ್ತಿದೆ."

ರಾಘವೇಂದ್ರ ಶರ್ಮ, ಕಲಬುರ್ಗಿ
ನಿವೃತ್ತ ಅಧ್ಯಾಪಕರು, ಸಾಹಿತಿ

ಇಂಥ ಕೃತಿಗಳನ್ನು ರಚಿಸುತ್ತ ಜನ್ಮ ಸಾರ್ಥಕ ಮಾಡಿಕೊಳ್ಳುತ್ತಿರುವಿರೆಂದು ಹೇಳದಿರಲಾರೆ. ದಿನಾಲು ರಾತ್ರಿ ಮಲಗುವ ಪೂರ್ವದಲ್ಲಿ ತಮ್ಮ ಈ ಸುಂದರಕಾಂಡ ರಾಮಾಯಣದ ಚಿಂತನೆ ಮಾಡುತ್ತಿರುವೆನು. ಬಹಳ ಸುಂದರ ಹಾಗೂ ಸರಳ ಕನ್ನಡದಲ್ಲಿದೆ. ಪುನಃ ಪುನಃ ಓದಬೇಕೆನ್ನಿಸುತ್ತದೆ.

ಶ್ರೀ ಭೀಮಸೇನಾಚಾರ್ಯ ಆಶ್ರಿತ
ಎಡ್ವೋಕೇಟ, ಕುಷ್ಟಗಿ

ಬಾಲರಾಮಾಯಣದ ಶಬ್ದಗಳ ಲಾಲಿತ್ಯ, ಓದುಗರ ಚಿತ್ತಕ್ಕೆ ತಂದುಕೊಡುವ ದೃಶ್ಯಗಳ ಔಚಿತ್ಯ, ಕನ್ನಡ ಭಾಷೆಯ ಸುಗಮ ಸಾಹಿತ್ಯ ಎಂಥ ಸಾಹಿತಿಯನ್ನೂ ಕೂಡ ಮುಗ್ಧನನ್ನಾಗಿ ಮಾಡುತ್ತದೆ. ಈ ಕವಿಯ ಲೇಖನಿಯಲ್ಲಿ ಎಂದಿಗೂ ಬತ್ತದ ದೇವನದಿ ಗಂಗೆಯಂತೆ ಹರಿದು ಬಂದು ಓದುಗರ ಹೃದಯ ಸಾಗರಕ್ಕೆ ಕೂಡುವಂತಿದೆ.

ನಾರಾಯಣ ರಂ. ಕೋಡಿಹಾಳ
ರೇಲ್ವೆ ಗಾರ್ಡ, ಸೋಲಾಪುರ

"I am greatly impressed by your literary style. The literary style in 'Bala Ramayana' is a delight to the intellect. The neat language with which it is written is a positive proof of the profound experience.

ಶ್ರೀ ಕೆ. ಜಗನ್ನಾಥ ಶೆಟ್ಟಿ
ಕರ್ನಾಟಕ ಹೈಕೋರ್ಟಿನ ನ್ಯಾಯಾಧೀಶರು

ವೀರ ಅದ್ಭುತ ವೃತ್ತಾಂತಗಳಿಂದ ಮನಸೆಳೆಯುವ ಕಥೆ, ಖಚಿತವಾಗಿ ಮನಸ್ಸಿನಲ್ಲಿ ನಿಲ್ಲುವಂತಹ ಪಾತ್ರಗಳು, ಸುಲಲಿತವಾದ ಪದಾವಲಿ, ಭಾವಪೂರ್ಣವಾದ ಹಿತಮಿತ ವರ್ಣನೆ ಮತ್ತು ಸುಲಭವಾದ ಛಂದೋಗತಿ ಈ ಎಲ್ಲ ಗುಣಗಳೂ ಪರಿಪಾಕಗೊಂಡಿರುವ ಈ ಹೊಸ ರಾಮಾಯಣ ಜನಪ್ರಿಯವಾಗುವದರಲ್ಲಿ ಸಂದೇಹವಿಲ್ಲ.

ಕಥಾ ನಿರೂಪಣೆಯಲ್ಲಿ ಓಟ ಕುಗ್ಗದಂತೆ, ಆಕರ್ಷಕ ಪ್ರತಿಭಾಪೂರ್ಣ ವರ್ಣನೆಯ ಸೊಬಗು ಮಾಸದಂತೆ, ಪಾತ್ರಗಳ ಸೂಕ್ಷ್ಮ ಭಾವಸ್ಪಂದನ ಸಜೀವವಾಗಿ ಉಳಿಯುವಂತೆ, ಲೇಖಕರು ನಾಲ್ಕು ಮಾತ್ರೆಗಳ ಹೊಸ ಚೌಪದಿಯ ಛಂದೋಗತಿಯನ್ನು ತಮ್ಮ ಸಮರ್ಥ ಮಾಧ್ಯಮವನ್ನಾಗಿ ಮಾಡಿಕೊಂಡಿದ್ದಾರೆ. ಅದು ಅಡೆತಡೆಯಿಲ್ಲದೆ ಸಾಗುತ್ತದೆ. ಅರ್ಥವ್ಯಕ್ತಿಯನ್ನೂ ಅಷ್ಟೇ ತೀವ್ರಗತಿಯಿಂದ ಸಾಧಿಸುತ್ತದೆ. ಪೌರಾಣಿಕ ಪ್ರಪಂಚವನ್ನು ಓದುಗರು ಸುಲಭವಾಗಿ ಪ್ರವೇಶಿಸುವಂತೆ ಈ ಕಥನಕಾವ್ಯ ದಾರಿ ತೋರುತ್ತದೆ.

'ಪ್ರಜಾವಾಣಿ' ದೈನಿಕ, ಬೆಂಗಳೂರು
೨೯-೧-೭೮ (ಡಾ. ಕೆ. ಕೃಷ್ಣಮೂರ್ತಿ ಇವರಿಂದ)

ಈ ಮೂರನೆಯ ಭಾಗವೂ ಸತ್ವ ಮತ್ತು ಸೌಂದರ್ಯ ಎರಡನ್ನೂ ಹೊತ್ತು ಪ್ರಕಟವಾಗಿದೆ. ರೋಚಕವಾದ ಲಲಿತವಾದ ಪದ್ಯಗಳಲ್ಲಿ ಹರಿಯುವ ಈ ರಾಮಕಥೆ ಸುಂದರವಾದ ಮುದ್ರಣದಿಂದ ಆಕರ್ಷಕವಾಗಿ ಬಂದಿದೆ.

'ಉದಯವಾಣಿ' ದೈನಿಕ, ಮಂಗಳೂರು
೧-೧-೭೮ (ಶ್ರೀ ರಾಮಾನುಜ ಇವರಿಂದ)

ನಿಮ್ಮ ಎಲ್ಲ ಕೃತಿಗಳನ್ನು ಓದಿದರೆ ಒಮ್ಮೆಗೆ ತೃಪ್ತಿ ಬರದು. ಪುನಃ ಪುನಃ ಓದಬೇಕೆಂಬ ಲವಲವಿಕೆ ಹುಟ್ಟುತ್ತದೆ. ಸಾಧಾರಣ ಮನುಷ್ಯನು ಸಹ ತಿಳಿಯುವ ಹಾಗೆ ಸುಲಭವಾದ ಶೈಲಿಯಲ್ಲಿ ಬರೆದಿದ್ದೀರಿ.

ಶ್ರೀ ಸಿ. ಕೆ. ದೇಶಪಾಂಡೆ
ಕಾರ್ಯದರ್ಶಿ ಖಾದಿಗ್ರಾಮೋದ್ಯೋಗ,
ಕಲಬುರ್ಗಿ

The language is so simple but rythmic that both adults and children enjoy to hear the story when it is sung.

ಶ್ರೀಮತಿ ಪದ್ಮಾವತಿ ವಿಠ್ಠಲರಾವ
ಎಮ್. ಎಲ್. ಸಿ ಬೆಂಗಳೂರು,
ಖ್ಯಾತ ಶಿಕ್ಷಕರು

* * *

ಪ್ರತಿಭಾ ಮುದ್ರಣ, ಧಾರವಾಡ

# ಯುದ್ಧ ಕಾಂಡ

**ಕುಂಭಕರ್ಣನ ಮರಣದಿಂದ ರಾವಣನ ಪ್ರತಿಕ್ರಿಯೆ :**

ತಮ್ಮನ ಮರಣದ ಸುದ್ದಿಯ ಕೇಳುತ
ರಾವಣನಾದನು ಕ್ಷಣದಲಿ ನಿಶ್ಚಲ
ಬಂದಿತು ಬವಳಿಯು ಒರಗಿದ ಅಲ್ಲಿಯೆ
ಮೂರ್ಛೆಯ ತಿಳಿಯುತ ಅಂದನು ರಾವಣ || ೧ ||

ವೈರಿಯ ದರ್ಪವ ಮುರಿದಿಹ ತಮ್ಮನೆ
ಕಾಲನ ಮನೆಯನು ಸೇರಿದುದೆಂತು
ನಿನ್ನನು ನಂಬಿಯೆ ಉರಿದೆನು ಮೆರೆದೆನು
ನಡುವೆಯೆ ಬಿಡುತಲಿ ಹೋದುದು ಏಕೆ || ೨ ||

ಇಂದ್ರನ ವಜ್ರಾಯುಧವನು ಕೂಡಾ
ಲೆಕ್ಕಿಸದೇನೇ ಸಾಗುವ ಕಲಿಯೇ
ರಾಮನ ಬಾಣಕೆ ಆಹುತಿಯಾದುದು
ತಿಳಿಯದು ಏನೂ ಚಿಂತನೆ ಮಾಡಲು || ೩ ||

ಕೈಯ್ಗಳ ಕಾಲ್ಗಳ ಕಡಿದನು ಅಂತೆ
ನಂತರ ಶಿರವನು ತರಿದನು ಅಂತೆ
ಸಾಗರದಿಂದಲಿ ದ್ವಾರದ ವರೆಗೂ
ನಿನ್ನಯ ದೇಹವು ಬಿದ್ದಿತು ಅಂತೆ ॥ ೪ ॥

ಏನಿದು ನಂಬಲು ಆಗದು ಎಷ್ಟೂ
ಆದರೆ ಸತ್ಯವು ಅಣಕಿಸುತಿರುವದು
ಎನ್ನಯ ಬಲಗೈ ಹೋಯಿತು ತಮ್ಮನೆ
ಎನ್ನಯ ದರ್ಪಕೆ ಧಕ್ಕೆಯು ತಟ್ಟಿತು ॥ ೫ ॥

ವಾನರ ಸೇನೆಯು ಕುಣಿಯುತಲಿರುವದು
ತಮ್ಮನ ಕೊಂದಿಹ ರಾಮನ ಕೊಲ್ಲುವೆ
ಇಲ್ಲದೆ ಹೋದರೆ ಸಾಯುವದೊಳಿತು
ತಮ್ಮನು ಇಲ್ಲದೆ ಬದುಕೆನು ನಾನೂ ॥ ೬ ॥

ದೇವರು ಎಲ್ಲರು ವೈರವ ನೆನಸುತ
ನಗುತಲೆ ಇರುವರು ಹರ್ಷದ ಭರದಲಿ
ವಿಭೀಷಣನೆಂದ ಮಾತೇ ಫಲಿಸಿತು
ಕೇಳದೆ ಆತನ ಕೆಟ್ಟೆನು ನಾನು ॥ ೭ ॥

ಪ್ರಹಸ್ತ ವಿಭೀಷಣ ಕುಂಭಕರ್ಣರ
ಮಾತನು ಕೇಳದೆ ಕೆಟ್ಟೆನು ನಿಜಕೂ
ಎನ್ನುತ ಹಲುಬುವ ತಂದೆಯ ನೋಡುತ
ಅಂದನು ತ್ರಿಶಿರನು ತಂದೆಗೆ ಈ ಪರಿ ॥ ೮ ॥

ತ್ರಿಶಿರನು ತಂದೆಗೆ ಹೇಳಿದುದು :

ಕಿರಿಪಿತ ಮಡಿದುದು ದುರ್ದೈವ ಮಾತ್ರ
ನೀವೋ ಇರುವಿರಿ ಅತಿಬಲ ಶೂರರು
ಶೋಕವು ಈ ಪರಿ ಸಾಮಾನ್ಯರಂತೆ
ಯುಕ್ತವು ಯುಕ್ತಿಯು ಅಲ್ಲವೆ ಅಲ್ಲವು ॥ ೯ ॥

ಬ್ರಹ್ಮನೆ ಕೊಟ್ಟಿಹ ಶಕ್ತ್ಯಾಯುಧವನು
ಅವನೇ ಕೊಟ್ಟಿಹ ಬಿಲ್ಲನು ಶರಗಳ
ಅಲ್ಲದೆ ಕೊಟ್ಟಿಹ ಕವಚವ ಕೂಡಾ
ಸಾವಿರ ಹಯಗಳು ಎಳೆಯುವ ರಥವೂ ॥ ೧೦ ॥

ಇರುವವು ನಿನ್ನವು ಯಾರಿಗು ಇಲ್ಲವು
ಆಯುಧ ಹಿಡಿಯದೆ ಗೆದ್ದಿಹೆ ಬಹು ಸಲ
ಆಯುಧ ಸಹಿತದಿ ಹೊರಟರೆ ನೀನು
ನಿಶ್ಚಯ ಗೆಲ್ಲುವೆ ರಾಮನ ಕೂಡಾ ॥ ೧೧ ॥

ಯುದ್ಧಕೆ ನೀನೇ ಹೋಗುವದಾದರು
ಏತಕೆ ಎನಿಸಿದೆ ನಾನೇ ಹೋಗುವೆ
ತ್ರಿಶಿರನ ವಚನವ ಕೇಳುತ ರಾವಣ
ಪುಳಕಿತನಾದನು ಕ್ಷಣದಲಿ ಆಗಲೆ ॥ ೧೨ ॥

ರಾವಣನು ತನ್ನ ನಾಲ್ವರು ಮಕ್ಕಳನ್ನು ಯುದ್ಧಕ್ಕೆ ಕಳಿಸುವನು :

ರಾವಣ ಕರೆದನು ನಾಲ್ವರು ತನುಜರ
ದೇವಾಂತಕನನು ತ್ರಿಶಿರ ಅತಿಕಾಯ
ಅಲ್ಲದೆ ನರಾಂತಕನನ್ನು ಕೂಡ
ಮಕ್ಕಳೆ ಕೇಳಿರಿ ಅತಿಬಲ ಶೂರರೆ ॥ ೧೩ ॥

ಗಗನದಿ ನಿಲ್ಲುತ ಮಾಯಾ ಯುದ್ಧವ
ಮಾಡುವ ಪರಿಣತ ವೀರರು ನೀವು
ಇಂದಿನ ವರೆಗೂ ಸೋಲನು ಅರಿಯರಿ
ಯುದ್ಧದಿ ಅಸ್ತ್ರದಿ ಪರಿಣತರಿರುವಿರಿ ॥ ೧೪ ॥

ಅಪ್ಪುತ ಅವರನು ಹರಸಿದನಾಗಲೆ
ಅವರಿಗೆ ಹೆಚ್ಚಿನ ರಕ್ಷಣೆ ನೀಡಲು
ಕಳಿಸಿದ ಮಹೋದರ ಮಹಾಪಾರ್ಶ್ವರ
ಮೂಲಿಕೆ ರಸವನು ಹಚ್ಚುತ ಮೈಯಿಗೆ ॥ ೧೫ ॥

ಆಯುಧ ಸಹಿತದಿ ಹೊರಟರು ಎಲ್ಲರು
ಐರಾವತ ಗಜ ಕುಲದಲಿ ಹುಟ್ಟಿದ
ಸುದರ್ಶನ ಗಜವನೇರಿ ಮಹೋದರ
ಸೂರ್ಯನ ತೆರದಲಿ ಮಿಂಚಿದನಾತನು

ಎಲ್ಲರು ಹೊರಟರು ಹೊಳೆಯುವ ರಥದಲಿ
ಎಲ್ಲರ ರಥಗಳ ಸಪ್ಪಳ ತುಂಬಿತು
ಸಿಂಹನಾದವೂ ತುಂಬಿತು ಲಂಕೆಯ
ರಭಸದಿ ಬಂದರು ಲಂಕೆಯ ಹೊರಗಡೆ ॥ ೧೭ ॥

ಬಿದ್ದರು ಒಮ್ಮೆಲೆ ಸೇನೆಯ ಮೇಲೆ
ನಡೆಯಿತು ಯುದ್ಧವು ಘೋರ ರೂಪದಲಿ
ಒಬ್ಬರನೊಬ್ಬರು ಕೊಲ್ಲುತ ನಡೆಯಲು
ಹರಿಯಿತು ರಣದಲಿ ನೆತ್ತರ ಕೋಡಿಯು ॥ ೧೮ ॥

ನರಾಂತಕನಂತೂ ಅಂತ~~ಕನೇ ಸೆರೆ~~
ಪ್ರಾಸಾಯುಧವನು ಬೀಸುತ ಬರಲು
ನಿಲ್ಲರು ಯಾರೂ ತಡೆಯಲು ಅವನನು
ತರಿಯುತ ಬಂದನು ವಾನರ ಪಡೆಯನು ॥ ೧೯ ॥

**ನರಾಂತಕ ಅಂಗದರ ಕಾಳಗ :**

ನೋಡುತ ಈ ಪರಿ ವಾನರ ರಾಜನು
ಅಂಗದ ಕುವರನೆ ಎದುರಿಸು ಅವನನು
ಹಾವಳಿ ಹೆಚ್ಚಿದೆ ಮುಗಿಸೈ ಅವನನು
ಎನ್ನಲು ಅಂಗದ ಹೋದನು ಎದುರಿಗೆ ॥ ೨೦ ॥

ಅಂತಕ ವೀರನೆ ನೋಡುವೆ ಶಕ್ತಿಯ
ಪ್ರಾಸವ ಎತ್ತುತ ಹೊಡೆಯಲೊ ಎದೆಗೆ
ಎನ್ನಲು ಹೊಡೆದನು ಅಂಗದನೆದೆಗೆ
ಆಯಿತು ಅದುವೇ ಮುರಿಯುತ ಪುಡಿಪುಡಿ ॥ ೨೧ ॥

ಅಂಗದ ಹೊಡೆಯುತ ಕೊಂದನು ಕುದುರೆಯ
ಸಿಟ್ಟಲಿ ಅಂತಕ ಗುದ್ದಿದ ತಲೆಗೆ
ಚಿಮ್ಮಿತು ರಕ್ತವು ಏಟಿಗೆ ಆಗಲೆ
ಕೋಪದ ಭರದಲಿ ಅಂಗದನಾಗಲೆ ॥ ೨೨ ॥

ಗುದ್ದಿದ ರಭಸದಿ ಅಂತಕನೆದೆಗೆ
ಎದೆಯದು ಬಿರಿಯಿತು ನೆತ್ತರ ಕಕ್ಕಿದ
ಉಕ್ಕುವ ತೆರದಲಿ ನೆಗೆಯುತ ಬಿದ್ದನು
ಅಸುವನು ನೀಗಿದ ಕ್ಷಣದಲಿ ಆತನು ॥ ೨೩ ॥

ದೇವಾಂತಕ ತ್ರಿಶಿರ ಮಹೋದರರು
ಸಿಟ್ಟಲಿ ಮುತ್ತುತ ವಾಲಿಯ ತನಯನ
ಅಂಗದ ಹೆದರದೆ ತೂರಿದ ಗಿರಿಗಳ
ರಕ್ಕಸರವುಗಳ ಕತ್ತರಿಸುತಿರಲು || ೨೪ ||

ಮೂವರು ಒಮ್ಮೆಲೆ ಹೊಡೆಯುತಲಿದ್ದರು
ಅಂಗದನೊಬ್ಬನೆ ಏಟಿಗೆ ಏಟನು
ಕೊಡುತಲಿ ಮೆರೆದನು ಯುದ್ಧದಿ ಆಗಲೆ
ಆದರು ಏಟಿಗೆ ಬಳಲಿದನಾತನು || ೨೫ ||

**ದೇವಾಂತಕ ಹನುಮಂತನ ಕದನ :**

ನೋಡುತ ಅಂಗದನೊಬ್ಬನೆ ಇದ್ದುದು
ಬಂದನು ಹನುಮನು ನೀಲನು ಅಲ್ಲಿಗೆ
ಹನುಮನು ಎದುರಿಸಿ ದೇವಾಂತಕನನು
ವಜ್ರಮುಷ್ಟಿಯಲಿ ಗುದ್ದಿದ ತಲೆಗೆ || ೨೬ ||

ರಾವಣ ತನಯನು ದೇವಾಂತಕನದು
ಹೊಡೆತಕೆ ಜರ್ಜರವಾಯಿತು ದೇಹವು
ಕಣ್ಣಿನ ಗುಡ್ಡೆಯು ಬಂದಿತು ಹೊರಗೆ
ರಕ್ತವ ಕಾರುತ ಅಸುವನು ನೀಗಿದ || ೨೭ ||

**ನೀಲನಿಂದ ಮಹೋದರನ ಸಂಹಾರ :**

ನೀಲನು ಎದುರಿಸಿ ಮಹೋದರನನ್ನು
ಕಂಡನು ಶರಗಳ ಸುರಿಮಳೆಯನ್ನು
ನೀಲನು ನಿಂತನು ಕುಂಠಿತನಾಗುತ
ಚೇತನ ಹೊಂದುತ ಹಾಗೆಯೆ ಕಾದಿದ || ೨೮ ||

ಕೊನೆಯಲಿ ಎತ್ತುತ ಪರ್ವತ ಶಿಖರವ
ಕುಕ್ಕಿದ ರಕ್ಕಸ ನೆತ್ತಿಯ ಮೇಲೆಯೆ
ತಲೆಯದು ಸಿಕ್ಕಿತು ಉದರದ ಒಳಗೆ
ಬಿದ್ದನು ಅದ್ರಿಯ ತೆರದಲಿ ರಕ್ಕಸ ॥ ೨೯ ॥

ಹನುಮಂತ ತ್ರಿಶಿರರ ಯುದ್ಧ

ಮಹೋದರನಂತ್ಯ ಕಾಣುತ ತ್ರಿಶಿರ
ಮುತ್ತಿದ ರಭಸದಿ ಹನುಮನ ಆಗಲೆ
ಮಾರುತಿ ಹಾರಿದ ನೇರಕೆ ರಥಕೆ
ಒದೆಯುತ ಕೊಂದನು ಕುದುರೆಗಳಲ್ಲಿಯೆ ॥ ೩೦ ॥

ತ್ರಿಶಿರನು ಬಿಟ್ಟನು ಶಕ್ತ್ಯಾಯುಧವನು
ಬಂದಿತು ರಭಸದಿ ಮಿಂಚುತ ಅದುವೇ
ಕಪಿವರ ಮಾರುತಿ ಹಿಡಿಯುತ ಕೈಯಲಿ
ಮುರಿಯುತ ಲಟಲಟ ಗರ್ಜನೆ ಮಾಡಿದ ॥ ೩೧ ॥

ತ್ರಿಶಿರನು ಬಂದನು ಕತ್ತಿಯ ಹಿರಿಯುತ
ಹೊಡೆದನು ಖಡ್ಗದಿ ಮಾರುತಿ ಎದೆಗೆ
ಮಾರುತಿ ಕೂಡಾ ಹೊಡೆದನು ಎದೆಗೆ
ಮೂರ್ಛೆಯ ಹೊಂದುತ ಬಿದ್ದನು ತ್ರಿಶಿರ ॥ ೩೨ ॥

ಹನುಮನು ಕಸಿಯುತ ಖಡ್ಗವನಾಗಲೆ
ಗರ್ಜನೆ ಮಾಡಿದ ಕೇಳಲು ಎಲ್ಲರು
ಆಗಲೆ ಚೇತನ ಹೊಂದುತ ತ್ರಿಶಿರನು
ಕೊಟ್ಟನು ಏಟನು ಹನುಮಗೆ ಮತ್ತೆ ॥ ೩೩ ॥

ಸಿಟ್ಟಲಿ ಹನುಮನು ಶಕ್ತಿಯನೆತ್ತುತ
ತ್ರಿಶಿರನ ಶಿರವನು ತರಿಯುತ ಮೆರೆದನು
ಅಲ್ಲದೆ ತೂರಿದ ಶಿರವನು ಮೇಲಕೆ
ಉಳಿದವನೊಬ್ಬನೆ ಮಹಾಪಾರ್ಶ್ವನು || ೩೪ ||

**ಮಹಾಪಾರ್ಶ್ವ–ಋಷಭರ ಕಾಳಗ**

ಗದೆಯನು ಬೀಸುತ ಗರ್ಜನೆ ಮಾಡುತ
ಬೆಂಕಿಯನುಗುಳುತ ಆಸೆಯ ನೇರುತ
ಬಂದನು ಪ್ರಳಯದ ಕಾಲನ ತೆರದಲಿ
ವಾನರ ಋಷಭನು ಎದುರಿಗೆ ಬಂದನು || ೩೫ ||

ರಾವಣನನುಜನು ಮಹಾಪಾರ್ಶ್ವನು
ತೂರಿದ ಗದೆಯನು ಋಷಭನ ಎದೆಗೆ
ಬವಳಿಯು ಬಂದಿತು ಅರುಣನ ತನಯಗೆ
ಋಷಭನು ಸಿಟ್ಟಲಿ ಗದೆಯನು ಎತ್ತುತ || ೩೬ ||

ಹೊಡೆದನು ಪಾರ್ಶ್ವನ ನೆತ್ತಿಯ ಮೇಲೆ
ತಲೆಯದು ಜಜ್ಜಿತು ಮುದ್ದೆಯು ಆದನು
ಉರುಳಿದ ಭೂಮಿಗೆ ಅಸುವನು ನೀಗುತ
ವಾನರ ವೀರರ ಗರ್ಜನೆ ತುಂಬಿತು || ೩೭ ||

**ಅತಿಕಾಯನ ಆಕ್ರಮಣ**

ಓಡುವ ರಕ್ಕಸ ವೀರರ ನೋಡುತ
ಅತಿಕಾಯನಾದ ಕೆಂಡದ ಉಂಡೆಯು
ಸೋದರರಿಬ್ಬರು ದೇವಾಂತಕ ತ್ರಿಶಿರ
ಕಿರಿಪಿತರಿಬ್ಬರು ಮಹೋದರ ಹಾಗು || ೩೮ ||

ಮಹಾಪಾರ್ಶ್ವನೂ ರಣದಲಿ ಒರಗಲು
ಬಂದನು ಯುದ್ಧಕೆ ಭೀಕರ ರೂಪದಿ
ಬ್ರಹ್ಮನ ವರವನು ಪಡೆದಿಹ ದಾನವ
ಕೂಗಿದನಾಗಲೆ ಯುದ್ಧಕೆ ಬಂದಿಹೆ ‖ ೩೯ ‖

ಎನ್ನಯ ನಾಮವು ಅತಿಕಾಯನೆಂದು
ಧೈರ್ಯವು ಇದ್ದರೆ ಬನ್ನಿರಿ ಎದುರಿಗೆ
ಕಪಿಗಳು ಬೆದರುತ ಚದುರಿದರಾಗಲೆ
ದೇಹವು ಕಂಡಿತು ಕುಂಭಕರ್ಣನದು ‖ ೪೦ ‖

ಓಡುತ ಬಂದಿತು ವಾನರ ಸೇನೆಯು
ರಾಮನು ತಡೆದನು ಅವರನು ಆಗಲೆ
ವಿಭೀಷಣನಾಗ ಬಂದನು ಅಲ್ಲಿಗೆ
ರಾಮನು ಕೇಳಿದ ಯಾರಿಹ ಈತನು ‖ ೪೧ ‖

ಪರ್ವತ ಪ್ರಾಯನು ಸಿಂಹನೇತ್ರಿಯು
ಸಾವಿರ ಹಯಗಳ ಕಟ್ಟಿಹ ರಥಿಕನು
ಧನುವನು ಶೂಲವ ಪ್ರಾಸತೋಮರವ
ಹೊಂದಿಹ ರಕ್ಕಸ ಯಾರಿಹನೀತನು ‖ ೪೨ ‖

ಇರುವರು ನಾಲ್ವರು ಸಾರಥಿಗಳಿವಗೆ
ಮೂರೆಡೆ ಬಾಗಿದ ಬಿಲ್ಲನು ಹಿಡಿದಿಹ
ರಥದಲಿ ಕಟ್ಟಿವೆ ಬತ್ತಳಿಕೆ ಸಾಲು
ಅಲ್ಲದೆ ಇಟ್ಟಿಹ ಶಕ್ತಿಯ ಆಯುಧ ‖ ೪೩ ‖

ಕತ್ತಿಗಳೆರಡನು ಕಟ್ಟಿಹ ಬದಿಯಲಿ
ಹತ್ತು ಮೊಳಕಿಂತ ಹೆಚ್ಚಿಗೆ ಉದ್ದವು
ತೇಜೋರಾಶಿಯು ಯಾರಿಹನೀತನು
ರಾವಣನನುಜನು ಹೇಳಿದನೀಪರಿ || ೪೪ ||

**ಅತಿಕಾಯನ ಬಗೆಗೆ ವಿಭೀಷಣನ ವಿವರಣೆ**

ಧಾನ್ಯಮಾಲಿನಿ ಉದರದಿ ಹುಟ್ಟಿಹ
ರಾವಣ ಕುವರನು ಅತಿಕಾಯ ಹೆಸರು
ಯುದ್ಧದಿ ರಾವಣ ಸರಿಸಮ ವೀರನು
ಗುರುಗಳ ಹಿರಿಯರ ಸೇವಿಸತಕ್ಕವ || ೪೫ ||

ಹಯಗಳ ಗಜಗಳ ವಿದ್ಯೆಯ ಬಲ್ಲವ
ಶಸ್ತ್ರ ಶಾಸ್ತ್ರಗಳ ತಿಳಿದಿಹ ನಿಪುಣನು
ಕತ್ತಿಯ ಬಿಲ್ಲಿನ ಕದನವ ಬಲ್ಲವ
ಪಾಶವನೆಸೆಯುತ ವೈರಿಯ ಹಿಡಿಯುವ || ೪೬ ||

ಕಪಟಯುಕ್ತಿಯಲಿ ಎತ್ತಿದ ಕೈಯೂ
ಮಂತ್ರಾಲೋಚನೆಯಲ್ಲಿಯು ನಿಪುಣನು
ಈತನ ಭುಜಬಲದಿಂದಲಿ ಲಂಕೆಯು
ನಿರ್ಭಯವಿರುವದು ನಿಸ್ಸೀಮ ವೀರ || ೪೭ ||

ತಪವನು ಮಾಡುತ ಬ್ರಹ್ಮನ ಕಡೆಯಿಂ
ಪಡೆದಿಹ ವರಗಳ ದಿವ್ಯಾಸ್ತ್ರಗಳನು
ದೇವರು ದಾನವರಿಂದಲಿ ಮರಣವು
ಇಲ್ಲವು ಇವನಿಗೆ ವರವನು ಪಡೆದಿಹ || ೪೮ ||

ಇಂದ್ರನ ವಜ್ರದ ಪರಿವೆಯೆ ಇಲ್ಲಾ
ವರುಣನ ಪಾಶದ ಅಂಜಿಕೆ ಇಲ್ಲಾ
ಅಲಕ್ಷ್ಯ ಮಾಡದೆ ವಿಲಂಬ ಮಾಡದೆ
ಕ್ರಮವದು ಬೇಕಿದೆ ತಡೆಯಲು ಅವನನು ॥ ೬೯ ॥

ರಕ್ಕಸನಾಗಲೆ ಹೊಕ್ಕನು ಸೇನೆಯ
ಎದುರಿಗೆ ಬರುತಿಹ ವಾನರ ವೀರರ
ತರಿಯುತ ನಡೆದನು ಯಾರೂ ತಡೆಯರು
ರಕ್ಕಸ ಗರ್ಜನೆ ಮೀರಿತು ಮೇರೆಯ ॥ ೭೦ ॥

ಕುಮುದ ದ್ವಿವಿದರು ಮೈಂದ ನೀಲರೂ
ಶರಭನು ಕೂಡಾ ಸರಿದರು ಹಿಂದಕೆ
ಏಟನು ತಿನ್ನುತ ಉಕ್ಕಿನ ಬಾಣದಿ
ನೇರಕೆ ಬಂದನು ರಾಮನ ಎದುರಿಗೆ ॥ ೭೧ ॥

**ಅತಿಕಾಯ ಲಕ್ಷ್ಮಣರ ಯುದ್ಧ :**

ರಾಮನೆ ಕೇಳೈ ಬಂದಿಹೆ ಯುದ್ಧಕೆ
ಎನ್ನನು ಎದುರಿಸಿ ಕಾಳಗ ಮಾಡುವ
ವೀರನು ಇದ್ದರೆ ಕಳುಹಿಸು ಅವನನು
ಕೇಳುತ ಈ ನುಡಿ ಲಕ್ಷ್ಮಣನೆದ್ದನು ॥ ೭೨ ॥

ಕೋಪದಿ ಪುಟಿಯುತ ಕಿಡಿಕಿಡಿಯಾಗುತ
ಬಿಲ್ಲನು ಹಿಡಿಯುತ ಶರಗಳ ಸೆಳೆಯುತ
ಠೇಂಕಾರದಿಂದ ನಭವನು ತುಂಬುತ
ಎದುರಿಗೆ ಬಂದನು ಲಕ್ಷ್ಮಣನಾಗಲೆ ॥ ೭೩ ॥

ನೋಡುತ ಅವನನು ಅತಿಕಾಯನೆಂದ
ಹೋಗೆಲೊ ಲಕ್ಷ್ಮಣ ಆಚೆಗೆ ನೀನು
ಹುಡುಗನು ಇರುತಿಹೆ ಯುದ್ಧವನರಿಯೆ
ನಿಂತರೆ ಕಳಿಸುವೆ ಅಂತಕನೆಡೆಗೆ || ೫೪ ||

ಕೇಳುತ ಈ ನುಡಿ ಲಕ್ಷ್ಮಣನೆಂದನು
ಮಾತಿನ ಮಲ್ಲನೆ ಶಕ್ತಿಯ ತೋರಿಸು
ಮಾತಿನ ಬಾಣವು ಕೊಲ್ಲದು ಯಾರನು
ಈಗಲೆ ತರಿಯುವೆ ನಿನ್ನಯ ಶಿರವನು || ೫೫ ||

ರಕ್ಕಸ ಬಿಟ್ಟನು ಭೀಕರ ಸರಳನು
ಲಕ್ಷ್ಮಣ ಕಡಿದನು ನಡುವೆಯೆ ಅದನು
ರಕ್ಕಸ ಬಿಟ್ಟನು ಬಾಣಗಳೈದನು
ಕಡಿದನು ಅವುಗಳ ಕೂಡಾ ನಡುವೆಯೆ || ೫೬ ||

ನಂತರ ಬಿಟ್ಟನು ಲಕ್ಷ್ಮಣ ಕೂಡಲೆ
ಉರಿಯುವ ಬಾಣವ ಹೋಗುತ ಅದುವೆ
ನಟ್ಟಿತು ಹಣೆಯಲಿ ಚಿಮ್ಮಿತು ರಕ್ತವು
ಏಟಿಗೆ ನಡುಗಿದ ರಕ್ಕಸನಾಗಲೆ || ೫೭ ||

ಭಾಪುರೆ ಲಕ್ಷ್ಮಣ ಮೆಚ್ಚಿದೆ ನಿನ್ನನು
ವೈರಿಯು ಆದರು ಹೊಗಳುವೆ ನಿನ್ನನು
ಎನ್ನುತ ಕರೆದನು ಬಾಣದ ಮಳೆಯನು
ಬಿಡುತಲಿ ಒಮ್ಮೆಲೆ ಏಳೇಳು ಸರಳ || ೫೮ ||

ಲಕ್ಷ್ಮಣ ಚಳಕದಿ ಕಡಿಯುತಲಿದ್ದನು
ರಕ್ಕಸ ಬಿಟ್ಟನು ಉರಿಯುವ ಶರವನು
ಬಡಿಯಿತು ಅದುವೆ ಲಕ್ಷ್ಮಣನೆದೆಗೆ
ತಾನೇ ಕಿತ್ತುತ ಒಗೆದನು ಲಕ್ಷ್ಮಣ || ೪೯ ||

ಕೋಪದಿ ಅಗ್ನಿಯ ಮಂತ್ರವ ಜಪಿಸುತ
ಬಿಟ್ಟನು ಅಗ್ನಿಯ ಅಸ್ತ್ರವ ಕೂಡಲೆ
ರಕ್ಕಸ ಬಿಟ್ಟನು ಸೌರ ಮಂತ್ರದಲಿ
ಜ್ವಲಿಸುವ ಉಗ್ರದ ಶರವನು ಎದುರಿಗೆ || ೫೦ ||

ಕಾಳಗ ನಡೆಯಿತು ಅಸ್ತ್ರಗಳಲ್ಲಿಯೆ
ಉರಿಯುತ ತಿಕ್ಕುತ ಶಾಂತವು ಆಗುತ
ಬಿದ್ದವು ಎರಡೂ ಕೊನೆಯಲಿ ಕೆಳಗೆ
ರಕ್ಕಸ ಬಿಟ್ಟನು ಐಷಿಕಾಸ್ತ್ರವನು || ೫೧ ||

ಲಕ್ಷ್ಮಣ ಬಿಟ್ಟನು ಐಂದ್ರಾಸ್ತ್ರವನು
ಒಂದಕೆ ಒಂದೂ ಬಡಿಯುತ ಅವುಗಳು
ಶಾಂತವು ಆಗುತ ಬಿದ್ದವು ಕೆಳಗೆ
ಲಕ್ಷ್ಮಣ ಸಿಟ್ಟಲೆ ಬಿಟ್ಟನು ಶರಗಳ || ೫೨ ||

ಜಾಲವ ನಿರ್ಮಿಸಿ ಮಳೆಯನು ಕರೆದನು
ಬಿಟ್ಟಿಹ ಬಾಣಗಳೆಲ್ಲವು ಹೋಗುತ
ಕವಚವ ತಟ್ಟುತ ಬೀಳುತಲಿದ್ದವು
ಅಚ್ಚರಿಗೊಂಡನು ಲಕ್ಷ್ಮಣನಾಗಲೆ || ೫೩ ||

ಎಂತಹ ಭೀಕರ ಬಾಣವು ಕೂಡಾ
ಕವಚವ ಭೇದಿಸಲಾರದು ಏನಿದು
ಆಗಲೆ ಬಂದಿತು ರಕ್ಕಸ ಬಾಣವು
ಎದೆಯಲಿ ನಾಟಿತು ಲಕ್ಷ್ಮಣ ಬಿದ್ದನು || ೬೪ ||

ಮೂರ್ಛೆಯ ತಿಳಿಯುತ ಕೂಡಲೆ ಏಳುತ
ಲಕ್ಷ್ಮಣ ಕೊಂದನು ಹಯಗಳ ಸಾರಥಿ
ಅಲ್ಲದೆ ಮುರಿದನು ರಕ್ಕಸ ಧ್ವಜವನು
ದೈತ್ಯನ ಕೊಲ್ಲಲು ಮಾಡಿದ ಯತ್ನವು || ೬೫ ||

**ವಾಯುವಿನ ಸಲಹೆ**

ಆಯಿತು ಎಲ್ಲವು ವ್ಯರ್ಥವು ನಿಜಕೂ
ಕೊನೆಯಲಿ ವಾಯುವು ಹೇಳಿದ ಕಿವಿಯಲಿ
ಬ್ರಹ್ಮನು ಕೊಟ್ಟಿಹ ಕವಚವ ಧರಿಸಿಹ
ಬ್ರಹ್ಮಾಸ್ತ್ರವೊಂದೇ ಕೊಲ್ಲಲು ಸಾಧ್ಯವು || ೬೬ ||

ಎನ್ನಲು ಲಕ್ಷ್ಮಣ ಜಪಿಸಿದ ಮಂತ್ರವ
ಬಿಟ್ಟನು ಆಗಲೆ ಬ್ರಹ್ಮಾಸ್ತ್ರವನು
ನೋಡುತ ಬರುತಿಹ ತೀಕ್ಷ್ಣದ ಅಸ್ತ್ರವ
ಬಿಟ್ಟನು ರಕ್ಕಸ ಅಸ್ತ್ರಗಳೆಷ್ಟೋ || ೬೭ ||

ಆದರು ನಿಲ್ಲದೆ ಬರುತಲೆ ಇತ್ತು
ಶಕ್ತಿಮುಷ್ಟಿಗದೆ ಕುಠಾರ ಶೂಲದಿ
ತಡೆಯಲು ಯತ್ನಿಸಿ ವಿಫಲನು ಆದನು
ಕೊನೆಯಲಿ ತರಿಯಿತು ರಕ್ಕಸ ಶಿರವನು || ೬೮ ||

ಪುಟಿಯಿತು ರುಂಡವು ಮೇಲಕೆ ಗಗನದಿ
ದೇಹವು ಬಿದ್ದಿತು ಪರ್ವತ ಪ್ರಾಯದಿ
ವಾನರ ಸೇನೆಯು ಗರ್ಜನೆ ಮಾಡಿತು
ಹಾಹಾಕಾರವು ರಾಕ್ಷಸ ಸೈನ್ಯದಿ ॥ ೬೯ ॥

**ಅತಿಕಾಯನ ಮರಣದ ಸುದ್ದಿಯು ರಾವಣನಿಗೆ ತಲುಪಿದುದು**

ಸುದ್ದಿಯು ತಲುಪಿತು ರಾವಣ ದೊರೆಗೆ
ಚಿಂತಿತನಾದನು ತಿಳಿಯದೆ ಏನೂ
ಎಂತಹ ವೀರರು ಹೋದರು ಕೂಡಾ
ಸಾಯುತಲಿರುವರು ರಾಮನ ಎದುರಿಗೆ ॥ ೭೦ ॥

**ರಾವಣನ ಚಿಂತೆ**

ಎಂದಿಗು ಸೋಲನು ಅರಿಯದ ವೀರರು
ಉತ್ತಮ ವರಗಳ ಪಡೆದಿಹ ಶೂರರು
ಯುದ್ಧಕೆ ಹೋದರು ಬಾರರು ತಿರುಗುತ
ಹೋದರು ಅತಿಶಯ ಶೂರರು ಎಲ್ಲರು ॥ ೭೧ ॥

ಇಂದ್ರಜಿತುವಿನದು ನಾಗಪಾಶವನು
ಮೀರುತ ಬಂದವರಾರೂ ಇಲ್ಲವು
ರಾಮನು ಲಕ್ಷ್ಮಣ ಪಾಶವ ಭೇದಿಸಿ
ಎದ್ದರು ಹೇಗೋ ತಿಳಿಯದು ಒಂದೂ ॥ ೭೨ ॥

ಎಚ್ಚರ ಭಟರೇ ಎಚ್ಚರವಿರಲಿ
ಎನ್ನನು ಕೇಳದೆ ಅಶೋಕವನದಲಿ
ಯಾರೂ ಹೋಗಲೆ ಬಾರದು ತಿಳಿಯಿರಿ
ಕೋಟೆಯ ರಕ್ಷಣೆ ಮಾಡಿರಿ ನೆಟ್ಟಗೆ ॥ ೭೩ ॥

ವಾನರ ಸೇನೆಯು ಅಲ್ಲಿಯೇ ಇದೆಯೋ
ಇಲ್ಲವೆ ಲಂಕೆಯ ಲಗ್ಗೆಯ ಹತ್ತುವ
ಸಿದ್ಧತೆ ಮಾಡುತಲಿರುವದೊ ತಿಳಿಯಿರಿ
ಎನ್ನುತ ನಡೆದನು ಅಂತಃಪುರದಲಿ || ೭೪ ||

ಅಲ್ಲಿಯು ಬಂದರು ರಕ್ಕಸ ಕೆಲವರು
ಹೇಳಿದರವನಿಗೆ ರಕ್ಕಸ ಮರಣವ
ಹೋಗಿಹ ಸೇನಾಪತಿಗಳು ಎಲ್ಲರು
ಮಲಗಿದರಲ್ಲಿಯೆ ರಣದಲಿ ಎಂದು || ೭೫ ||

ತನುಜರು ಹೋದರು ಅನುಜರು ಹೋದರು
ಎಂದೂ ಸೋಲದ ವೀರರು ಹೋದರು
ಉಕ್ಕಿತು ದುಃಖವು ಮಿಕ್ಕಿತು ಚಿಂತೆಯು
ಶೋಕದಿ ಕಂಬನಿ ತುಂಬಿದವಾಗಲೆ || ೭೬ ||

**ತಂದೆಗೆ ಇಂದ್ರಜಿತುವಿನ ಆಶ್ವಾಸನೆ**

ಕಾಣುತ ಈ ಪರಿ ದುಃಖದಿ ತಂದೆಯ
ಅಂದನು ಆಗಲೆ ಮೇಘನಾದನು
ಏತಕೆ ಶೋಕವು ತಂದೆಯೆ ನಿನಗೆ
ಶೋಭಿಸದೆಂದಿಗು ಕಂಬನಿಗರೆವುದು || ೭೭ ||

ನಿನ್ನಯ ಕುವರನು ಇಂದ್ರಜಿತುವು ನಾ
ಇರುತಿಹೆ ವಿಶ್ವವ ಗೆಲ್ಲಲು ಬೇಕಿರೆ
ಪ್ರತಿಜ್ಞೆ ಮಾಡುತ ಹೊರಡುವೆ ಈಗಲೆ
ವಾನರ ಸೇನೆಯ ತರಿಯುವೆ ಎಲ್ಲವ || ೭೮ ||

ಅಲ್ಲದೆ ಕೆಡಹುವೆ ರಾಮ-ಲಕ್ಷ್ಮಣರ
ಎನ್ನುತ ಹತ್ತಿದ ಖರಾನಿಳ ಹೂಡಿದ
ವಾಯು ವೇಗದಲಿ ಚಲಿಸುವ ರಥವನು
ಹೊರಟಿತು ಜೊತೆಗೇ ರಕ್ಕಸ ತಂಡವು || ೭೯ ||

ರಾವಣ ಮಾಡಿದ ಆಶೀರ್ವಾದವ
ಹೊರಟಿತು ರಾವಣ ತನಯನ ಸೇನೆಯು
ತಡೆದನು ರಥವನು ಕೋಟೆಯ ಹತ್ತಿರ
ರಕ್ಕಸ ವೀರರ ನಿಲ್ಲಿಸಿ ಸುತ್ತಲು || ೮೦ ||

ಇಂದ್ರಜಿತುವಿನ ಹೋಮ

ಹೋಮ ಕುಂಡದಲಿ ಅಗ್ನಿಯ ಹೊತ್ತಿಸಿ
ವಿಧಿಯಲಿ ಉಜ್ವಲಗೊಳಿಸುತ ಅದನು
ಮಾಲೆಯ ಗಂಧವ ಅರಳನು ಹವಿಸನು
ಅರ್ಪಿಸಿ ಮಂತ್ರವ ಜಪಿಸುತ ಆತನು || ೮೧ ||

ಆಭಿಚಾರಿಕದ ಹೋಮವ ಮಾಡಿದ
ಆಯುಧ ಹುಲ್ಲನು ಸಮಿತ್ತು ವಸ್ತ್ರವ
ಅಲ್ಲದೆ ಹಾಕುತ ಕಪ್ಪನ ಮೇಕೆಯ
ಹೋಮವ ಮಾಡುತ ಬೇಡಿದ ಅಗ್ನಿಯ || ೮೨ ||

ಅಗ್ನಿಯು ತಾನೇ ಹವಿಸನು ಪಡೆದನು
ಬ್ರಹ್ಮದೇವನನು ಆಹ್ವಾನಿಸಿದನು
ಧನು ರಥ ತೂಣೀರಗಳನೆಲ್ಲವ
ಅಭಿಮಂತ್ರಿಸುತಲಿ ಸಿದ್ಧನು ಆದನು || ೮೩ ||

ಬ್ರಹ್ಮಾಸ್ತ್ರವನೂ ಆಹ್ವಾನಿಸುತಲಿ
ಅಗ್ನಿಯಲಾಗಲೆ ಹೋಮವ ಮಾಡಲು
ನಡುಗಿತು ಗಗನವು ಉಡುಗಿತು ಗಾಳಿಯು
ಅಚಿಂತ್ಯ ಮಂತ್ರದ ಶಕ್ತಿಯ ಹೊಂದಿದ || ೮೪ ||

ಇಂದ್ರಜಿತುವಿನ ಅಬ್ಬರದ ಆಕ್ರಮಣ

ರಕ್ಕಸ ಭಟರೇ ಸೋಲೆನು ಎಂದಿಗು
ಒಂದೇ ಮನದಲಿ ಯುದ್ಧವ ಮಾಡಿರಿ
ಎನ್ನುತ ಬಿಟ್ಟನು ಹರಿತ ಶರಗಳನು
ಹಾಹಾಕಾರವು ತುಂಬಿತು ಎಲ್ಲೆಡೆ || ೮೫ ||

ಒಂದೇ ಬಾಣವು ಆಗುತ ಅನೇಕ
ಕೊಲ್ಲುತಲಿದ್ದಿತು ವಾನರ ಸೇನೆಯ
ವಾನರ ವೀರರ ಸಾಹಸವೆಲ್ಲವು
ಆಯಿತು ವಿಫಲವು ಓಡಿದರೆಲ್ಲೆಡೆ || ೮೬ ||

ಹೊಡೆದನು ಮೈಂದನ ಗಂಧಮಾದನನ
ಗಾಯವಗೊಳಿಸಿದ ಜಾಂಬವನನ್ನೂ
ನೀಲನು ತಿಂದನು ಬಿರುಸಿನ ಏಟನು
ಸುಗ್ರೀವ ಋಷಭ ಅಂಗದ ದ್ವಿವಿದರು || ೮೭ ||

ಮೂರ್ಛೆಯ ಹೊಂದುತ ಬಿದ್ದರು ಕೆಳಗೆ
ಎಲ್ಲೆಡೆ ಕಂಡಿತು ಬಾಣವೆ ಬಾಣವು
ಬಳಲಿತು ವಾನರ ಸೇನೆಯು ಅತಿಶಯ
ಎಲ್ಲೆಡೆ ಕಂಡನು ವಾನರ ಹತಬಲ || ೮೮ ||

ವಾನರ ವೀರರ ಖತಿ

ಹೊಕ್ಕನು ಒಬ್ಬನೆ ವಾನರ ಸೇನೆಯು
ಕಾಣದೆ ಯಾರಿಗು ಮಾಯಾಬಲದಲಿ
ತರಿಯುತಲಿದ್ದನು ವಾನರ ವೀರರ
ಕಾಣುತಲಿದ್ದವು ಅಸ್ತ್ರಗಳಷ್ಟೇ ॥ ೮೯ ॥

ನಭದಿಂ ಬರುವದು ಬಾಣದ ಮಳೆಯು
ಕಾಣದು ಏನೂ ಯಾರೂ ನಭದಲಿ
ಹನುಮ ಸುಗ್ರೀವ ಮೈಂದ ನೀಲ ಗಜ
ಗವಾಕ್ಷ ಗೋಮುಖ ಕೇಸರಿ ದಧಿಮುಖ ॥ ೯೦ ॥

ಹರಿಲೋಮ ಕುಮುದ ವಿದ್ಯುದ್ದಂಷ್ಟ್ರ
ಸೂರ್ಯಾನನ ನಲ ವಾನರ ವೀರರು
ಎಲ್ಲರು ಗಾಯವ ಹೊಂದುತ ಸಿಡಿದರು
ಆದರು ನಭದಲಿ ಕಾಣರು ಯಾರೂ ॥ ೯೧ ॥

ಹಾಗೆಯೆ ರಾವಣ ತನಯನು ಆಗಲೆ
ಸುರಿಸಿದ ಶರಗಳ ಮಳೆಯನು ನೇರಕೆ
ರಾಮ-ಲಕ್ಷ್ಮಣರ ಮೇಲೆಯೆ ಆದರು
ಕಾಣನು ಯಾರಿಗು ಮಾಯಾ ಬಲದಲಿ ॥ ೯೨ ॥

ರಾಮನು ಅಂದನು ಲಕ್ಷ್ಮಣ ನೋಡು
ಬ್ರಹ್ಮಾಸ್ತ್ರ ಬಲವ ಹೊಂದಿದ ರಕ್ಕಸ
ಎಚ್ಚರದಿಂದಲಿ ಕಾಣದೆ ಎಮಗೆ
ಅಸ್ತ್ರವ ಬಿಡುತಲಿ ಯುದ್ಧವ ನಡೆಸಿಹ ॥ ೯೩ ॥

**ರಾಮ-ಲಕ್ಷ್ಮಣರು ಮೂರ್ಛಿತರಾಗುವದು**

ಬ್ರಹ್ಮನ ಮಹಿಮೆಯು ಅಚಿಂತ್ಯವಿರುವದು
ಅವನೇ ಕೊಟ್ಟಿಹ ಅಸ್ತ್ರವು ಇದುವೇ
ಕೊಲ್ಲುವದೆಂತೋ ತಿಳಿಯದು ಈಗಲೆ
ಸಹಿಸುವದೊಂದೇ ಉಳಿದಿದೆ ಎಮಗೆ ॥ ೯೪ ॥

ರಾಮ ಲಕ್ಷ್ಮಣರು ಮೂರ್ಛಿತರಾಗುತ
ಬಿದ್ದರು ಅಲ್ಲಿಯೆ ಶರಗಳ ಜಾಲದಿ
ಮೇಘನಾದನೇ ಸಿಂಹನಾದವನು
ಮಾಡುತ ತಿರುಗಿದ ಲಂಕೆಗೆ ಆತನು ॥ ೯೫ ॥

ರಾಮ ಲಕ್ಷ್ಮಣರು ಇಬ್ಬರು ಬೀಳಲು
ತಿಳಿಯರು ವಾನರ ವೀರರು ಯಾರೂ
ಮಾಡಲು ಏನೂ ಖಿನ್ನರು ಆದರು
ವಿಭೀಷಣನೆಂದ ಕೇಳಿರಿ ವೀರರೆ ॥ ೯೬ ॥

**ವಿಭೀಷಣನ ಸಾಂತ್ವನ**

ಬ್ರಹ್ಮನ ಶಕ್ತಿಗೆ ಮಾನ್ಯತೆ ನೀಡಲು
ರಾಮ ಲಕ್ಷ್ಮಣರು ಮೂರ್ಛಿತರಿರುವರು
ಕಾರಣ ಯಾರಿಗು ಚಿಂತೆಯು ಬೇಡಾ
ಏಳುವರೆಂಬುದು ನಿಶ್ಚಿತ ತಿಳಿಯಿರಿ ॥ ೯೭ ॥

ಮೊದಲಿಗೆ ಎದ್ದವ ಹನುಮನು ಮಾತ್ರ
ವಿಭೀಷಣ ಕೇಳು ಸೈನ್ಯವು ಬಿದ್ದಿದೆ
ನೋಡುವ ಈಗಲೆ ತಿಳಿಯುವ ಮೊದಲಿಗೆ
ಸತ್ತವರಾರದು ಮೂರ್ಛೆಯು ಯಾರದು ॥ ೯೮ ॥

ಇಬ್ಬರು ಹೊರಟರು ಪಂಜನು ಹಿಡಿಯುತ
ಹುಡುಕುತ ಮೊದಲಿಗೆ ಜಾಂಬವಂತನನು
ಕಂಡರು ಬಿದ್ದಿಹ ಜಾಂಬವ ವೀರನ
ವಿಭೀಷಣನಾಗ ಕೇಳಿದ ಅವನಿಗೆ ॥ ೯೯ ॥

**ಜಾಂಬುವಂತನು ಹನುಮಂತನ ಬಗೆಗೆ ವಿಚಾರಿಸುವದು**

ಜಾಂಬವ ವೀರನೆ ಬದುಕಿಹೆಯಲ್ಲವೆ
ತಡೆಯುತ ಬ್ರಹ್ಮನ ಅಸ್ತ್ರವ ನೀನೂ
ದನಿಯಲಿ ಗುರುತಿಸಿ ವಿಭೀಷಣನನ್ನು
ಮಾರುತಿ ಜೀವದಿ ಇರುವನೆ ಹೇಳಿರಿ ॥ ೧೦೦ ॥

ವಿಭೀಷಣನೆಂದ ಏನಿದು ವಿಚಿತ್ರ
ರಾಮ ಲಕ್ಷ್ಮಣರ ಸುಗ್ರೀವನನು
ಅಲ್ಲದೆ ಅಂಗದ ವಿಚಾರವಿಲ್ಲದೆ
ಕೇವಲ ಹನುಮನ ಕೇಳುತಲಿರುತಿಹೆ ॥ ೧೦೧ ॥

ಜಾಂಬವನೆಂದನು ವಿಭೀಷಣ ಕೇಳು
ಹನುಮನು ಸತ್ತರೆ ಸೇನೆಯು ಇದ್ದರು
ಸತ್ತಿಹರೆಂದೇ ತಿಳಿದಿರು ನೀನು
ಹನುಮನು ಉಳಿಯುತ ಸೇನೆಯು ಸತ್ತರೆ ॥ ೧೦೨ ॥

ಸೇನೆಯು ಬದುಕಿದೆಯೆಂದೇ ತಿಳಿಯಿರಿ
ಕೇಳುತ ಈ ನುಡಿ ಹನುಮನು ಬಂದನು
ಪಾದವ ಮುಟ್ಟುತ ಅಂದನು ಆಗಲೆ
ಆರ್ಯನೆ ಇರುವೆನು ಇಲ್ಲಿಯೆ ನಾನು ॥ ೧೦೩ ॥

ಹನುಮಂತನಿಗೆ ಜಾಂಬುವಂತನ ಸಲಹೆ

ಕೇಳುತ ಈ ನುಡಿ ಸಂತಸದಿಂದಲಿ
ಹನುಮನೆ ವಾನರ ಸೇನೆಯನೀಗಲೆ
ಉಳಿಸುವ ಕಾರ್ಯವು ನಿನ್ನದೆ ಇರುವದು
ಕೋಟಿ ಸಂಖ್ಯೆಯಲಿ ಸತ್ತಿವೆ ಕಪಿಗಳು ॥ ೧೦೪ ॥

ನಿನ್ನಯ ಶಕ್ತಿಯ ತೋರುವ ಸಮಯವು
ಬಂದಿದೆ ಈಗಲೆ ಸೇನೆಯ ಬದುಕಿಸು
ರಾಮ ಲಕ್ಷ್ಮಣರ ಬಾಧೆಯ ತೊಲಗಿಸು
ಸಾಗರ ಲಂಘಿಸಿ ದೂರಕೆ ಹೋಗುತ ॥ ೧೦೫ ॥

ಹಿಮಾಲಯದಲ್ಲಿ ಉನ್ನತ ಶಿಖರದಿ
ಇರುವದು ಶಿಖರವು ಋಷಭ ಹೆಸರಿನದು
ಕಾಂಚನಮಯವಿಹ ಪರ್ವತವಿರುವದು
ಆದರಲಿ ಇರುವದು ಮೂಲಿಕೆ ಪರ್ವತ ॥ ೧೦೬ ॥

ಸಿಗುವವು ಅಲ್ಲಿಯೆ ಔಷಧ ಮೂಲಿಕೆ
ಹೊಳೆಯುತಲಿರುವವು ಎಲ್ಲೆಡೆಯಲ್ಲಿಯು
ಆದರಲಿ ಇರುವವು ದಿವ್ಯ ಮೂಲಿಕೆ
ನಾಲ್ಕೇ ಇರುವವು ಬಹು ಉಪಯುಕ್ತವು ॥ ೧೦೭ ॥

ಮೃತಸಂಜೀವಿನಿ ವಿಶಲ್ಯಕರಣಿಯು
ಸಾವರ್ಣಕರಣಿ ಸಂಧಾನಕರಣಿ
ಮೊದಲನೆ ಔಷಧ ಬದುಕಿಸಲು ಬೇಕು
ಆಯುಧ ಕೀಳುತ ಗಾಯವ ಕಳೆಯಲು ॥ ೧೦೮ ॥

ವಿಶಲ್ಯಕರಣಿಯು ಅವಶ್ಯಬೇಕು
ಗಾಯವ ಮಾಯಿಸಿ ಚರ್ಮಕೆ ಆಗಲೆ
ಮೊದಲಿನ ರೀತಿಯ ಬಣ್ಣವನೀಯಲು
ಸಾವರ್ಣಕರಣಿ ಬೇಕಿದೆ ಎಮಗೆ || ೧೦೯ ||

ಕಡಿದಿಹ ಅವಯವ ಕೂಡಿಸಿಕೊಳ್ಳಲು
ಸಂಧಾನಕರಣಿಯು ಬೇಕೇ ಬೇಕು
ತರುತಲಿ ಔಷಧಿ ಎಲ್ಲವ ನೀನು
ಬದುಕಿಸು ವಾನರ ಸೇನೆಯ ಕೂಡಲೆ || ೧೧೦ ||

ಕೇಳುತ ಈ ನುಡಿ ಹನುಮನ ಮನದಲಿ
ಉಕ್ಕಿತು ಸಂತಸ ಧಾರಿಯು ಕಂಡಿತು
ಉಬ್ಬಿಸಿ ಮೈಯನು ತ್ರಿಕೂಟ ಪರ್ವತ
ಏರುತ ನಿಂತನು ಗಿರಿ ಶಿಖರದಲಿ || ೧೧೧ ||

**ಹನುಮಂತನು ಹಿಮಾಲಯಕ್ಕೆ ನೆಗೆದುದು :**

ದೇಹವ ಬೆಳೆಸಿದ ಪರ್ವತಪ್ರಾಯದಿ
ಕುಸಿಯಿತು ಶಿಖರವು ಒತ್ತಡದಿಂದಲಿ
ಗರ್ಜನೆ ಮಾಡುತ ನೆಗೆದನು ಮೇಲಕೆ
ರಭಸದಿ ಸಾಗುತ ಕಂಡನು ಹಿಮಗಿರಿ || ೧೧೨ ||

ಕಂಡನು ಹಿರಣ್ಯಗರ್ಭ ಸ್ಥಾನವ
ಹೆಸರಿದೆ ಅದಕೆ ಬ್ರಹ್ಮಕೋಶವು
ಕಂಡನು ಅಲ್ಲಿಯೆ ರಜತಾಲಯವನು
ಇಂದ್ರನ ಆಶ್ರಮ ಸ್ಥಾನವ ಕಂಡನು || ೧೧೩ ||

ರುದ್ರನು ಶರಗಳ ಬಿಟ್ಟಿಹ ಸ್ಥಾನವ
ಹಯಗ್ರೀವನೆಲ ಬ್ರಹ್ಮಕಪಾಲವ
ಬ್ರಹ್ಮನು ಇಂದ್ರಗೆ ವಜ್ರಾಯುಧವನು
ಕೊಟ್ಟಿಹ ತಾಣವ ಕಂಡನು ಹನುಮನು ॥ ೧೧೪ ॥

ಹಾಗೆಯೆ ನೋಡಿದ ಕುಬೇರ ತಾಣವ
ಸೂರ್ಯನ ತೆರದಲಿ ಬೆಳಗುವ ತಾಣವ
ಚತುರ್ಮುಖ ಬ್ರಹ್ಮನ ತಾಣವ ಕೂಡ
ರುದ್ರನ ಧನುವದು ಪಿನಾಕವಿರುತಿಹ ॥ ೧೧೫ ॥

ತಾಣವ ಅಲ್ಲದೆ ಭೂಮಿಯ ಹೊಕ್ಕಳ
ಶಂಕರ ಮಾಡುವ ತಪಸಿನ ತಾಣವ
ನೋಡುತ ಬಂದನು ಕಾಂಚನ ಶೈಲಕೆ
ಋಷಭಾಚಲದಲಿ ಔಷಧದಾಗರ ॥ ೧೧೬ ॥

ಅಗ್ನಿಯ ತೆರದಲಿ ಔಷಧಿಯೆಲ್ಲವು
ಝಗಝಗಿಸುತಲಿಹವೆಲ್ಲೆಡೆ ಅವುಗಳು
ಜಾಂಬವ ಹೇಳಿದ ಮೂಲಿಕೆ ಹುಡುಕಲು
ತಿರುಗಿದ ಅಲ್ಲಿಯೆ ಋಷಭಗಿರಿಯಲಿ ॥ ೧೧೭ ॥

ಹುಡುಕುವ ಹನುಮನ ನೋಡುತ ಔಷಧಿ
ಎಲ್ಲವು ಆದವು ಅದೃಶ್ಯ ಬೇಗ
ಹನುಮನು ಕಾಣದೆ ಔಷಧ ಮೂಲಿಕೆ
ಕುಪಿತನು ಆಗುತ ಗರ್ಜನೆ ಮಾಡಿದ ॥ ೧೧೮ ॥

## ಹನುಮನ ಕೋಪ

ಏನಿದು ಜೇಷ್ಟೆಯು ಪರ್ವತರಾಜನೆ
ರಾಮನ ವಿಷಯದಿ ಮರುಕವು ಇಲ್ಲವೆ
ಪುಡಿಪುಡಿ ಮಾಡುವೆ ನಿನ್ನನು ಕುಟ್ಟುತ
ಎನ್ನುತ ಕಿತ್ತಿದ ಶಿಖರವ ಆಗಲೆ ॥ ೧೧೯ ॥

ಶಿಖರದ ಸಹಿತವೆ ನೆಗೆದನು ಹನುಮನು
ಮೃತಸಂಜೀವನಿ ಗಾಳಿಯು ತಗಲಲು
ಎದ್ದರು ಸತ್ತಿಹ ವಾನರರೆಲ್ಲರು
ಗಂಧವ ಮೂಸುತ ರಾಮಲಕ್ಷ್ಮಣರು ॥ ೧೨೦ ॥

ಎದ್ದರು ಇಬ್ಬರು ಬಾಧೆಯು ಕಳೆಯುತ
ವಾನರ ಸೇನೆಯು ಎಲ್ಲವು ಬದುಕಿತು
ಆಯಿತು ಕೂಡಲೆ ಯುದ್ಧಕೆ ಸಿದ್ಧವು
ಗರ್ಜನೆ ತುಂಬಿತು ಎಲ್ಲೆಡೆ ಆಗಲೆ ॥ ೧೨೧ ॥

ರಕ್ಕಸ ಸೇನೆಯು ಬದುಕಲೆ ಇಲ್ಲಾ
ರಾವಣನಾಜ್ಞೆಯು ಇದ್ದಿತು ಅವರಿಗೆ
ಸತ್ತಿಹ ರಕ್ಕಸರೆಲ್ಲರ ದೇಹವ
ತೂರುತಲಿದ್ದರು ಸಾಗರದೊಳಗೆ ॥ ೧೨೨ ॥

ಸತ್ತಿಹ ರಕ್ಕಸವೀರರ ಲೆಕ್ಕವು
ಹತ್ತಲು ಬಾರದು ಎನ್ನುವ ಕಾರಣ
ರಾವಣನಾಜ್ಞೆಯು ಇದ್ದಿತು ಆ ಪರಿ
ಅಂತೆಯೇ ರಕ್ಕಸರಾರೂ ಬದುಕರು ॥ ೧೨೩ ॥

ನಂತರ ಹನುಮನು ಎತ್ತುತ ಗಿರಿಯನು
ಒಯ್ಯುತ ಇಟ್ಟನು ಹಿಮಗಿರಿಯೊಳಗೆ
ಬರುತಲಿ ಸೇರಿದ ರಾಮನ ಹತ್ತಿರ
ಹನುಮನ ಅಪ್ಪುತ ಒತ್ತಿದ ಎದೆಗೆ || ೧೨೪ ||

ಲಂಕೆಗೆ ಬೆಂಕಿ ಹಚ್ಚಲು ಸುಗ್ರೀವನ ಆಜ್ಞೆ :

ಕೂಡಿದರೆಲ್ಲರು ವಾನರ ವೀರರು
ಮುಂದಿನ ಯುದ್ಧದ ಯೋಚನೆ ಮಾಡಲು
ವಾನರ ರಾಜನು ಅಂದನು ವೀರರೆ
ಕುಂಭಕರ್ಣನೂ ರಾವಣಪುತ್ರರು || ೧೨೫ ||

ಸತ್ತಿಹ ಕಾರಣ ರಾವಣ ತಾನೇ
ಯುದ್ಧಕೆ ಬಾರನು ಅನಿಸಿದೆ ಎನಗೆ
ಅತಿಬಲ ವೇಗದ ವಾನರ ವೀರರು
ಲಂಕೆಯ ಗೋಡೆಯ ಹಾರುತ ಹೋಗಿರಿ || ೧೨೬ ||

ಕೈಯಲಿ ಪಂಜುಗಳೆಲ್ಲರು ಹಿಡಿಯಿರಿ
ಬೆಂಕಿಯ ಹಚ್ಚಿರಿ ಲಂಕೆಯ ಒಳಗೆ
ಕತ್ತಲೆ ಮುತ್ತಲು ವಾನರ ವೀರರು
ಹೊಕ್ಕರು ಲಂಕೆಯ ಪಂಜಿನ ಸಹಿತದಿ || ೧೨೭ ||

ಲಂಕೆಯ ದ್ವಾರಕೆ ಅಟ್ಟದ ಮನೆಗೆ
ಎದುರಿಗೆ ಕಾಣುವ ವಸ್ತುವಿಗೆಲ್ಲಕು
ಬೆಂಕಿಯನಿಡುತಲಿ ಸುಟ್ಟರು ಎಲ್ಲವ
ಭವನಗಳಾದವು ಬೂದಿಯ ರಾಶಿಯು || ೧೨೮ ||

ಮುತ್ತಿನ ಮಣಿಗಳು ರತ್ನ-ಹವಳಗಳು
ಉತ್ತಮ ರೇಶಿಮೆ ಉಣ್ಣೆಯ ವಸ್ತ್ರವು
ಆದವು ಎಲ್ಲವು ಬೂದಿಯ ರಾಶಿಯು
ಬೆಳ್ಳಿಯ ಚಿನ್ನದ ಒಡವೆಗಳೆಲ್ಲವು ॥ ೧೨೯ ॥

ಕರಗುತ ಆದವು ಮುದ್ದೆಯು ಅಲ್ಲಿಯೆ
ಹಯ ಗಜ ಕಂಠದ ಒಡವೆಗಳೆಲ್ಲಾ
ಆಯುಧ ರಥಗಳು ಯೋಧರ ಕವಚವು
ರೋಮಸಿರ್ಮಿತವು ಚಾಮರಾದಿಗಳು ॥ ೧೩೦ ॥

ಬಿದ್ದವು ಎಲ್ಲವು ಬೆಂಕಿಯ ಬಾಯಿಗೆ
ರಕ್ಕಸರೆಲ್ಲರು ತಿಳಿಯದೆ ಏನೂ
ಓಡಿದರೆಲ್ಲೆಡೆ ಮಾಡದೆ ಏನೂ
ಮಾವುತರೆಲ್ಲರು ಗಜಗಳ ಬಿಚ್ಚುತ ॥ ೧೩೧ ॥

ಬಿಟ್ಟರು ಹೊರಗಡೆ ಬದುಕಲಿ ಎಂದೂ
ಹಯಗಳ ಬಿಟ್ಟರು ದನಗಳ ಬಿಟ್ಟರು
ಓಡುತ ಅವುಗಳು ತುಳಿದವು ಎಲ್ಲರ
ಲಂಕೆಯ ಬೆಂಕಿಯು ಕಂಡಿತು ಹೊರಗಡೆ ॥ ೧೩೨ ॥

ವಾನರ ಗರ್ಜನೆ ಸಾಗುತಲಿದ್ದಿತು
ರಾಮನು ಎತ್ತುತ ಧನುವನು ಕೈಯಲಿ
ಠೇಂಕಾರ ಮಾಡುತ ಸಪ್ಪಳಗೈದನು
ಕೇಳಿತು ಅದುವೇ ಲಂಕಾ ನಗರದಿ ॥ ೧೩೩ ॥

ಒಂದೇ ಸಮನೆ ಠೇಂಕಾರ ಕೇಳಿ
ರಕ್ಕಸರೆಲ್ಲರು ನಡುಗಿದರಾಗಲೆ
ಲಂಕೆಯ ಮನೆಮನೆಯಲ್ಲಿಯೆ ಆಗಲೆ
ವಾನರ ರಕ್ಕಸ ಯುದ್ಧವು ನಡೆಯಿತು ॥ ೧೩೪ ॥

ರಾಮನು ಮಾಡಿದ ಶರಗಳ ಸುರಿಮಳೆ
ಹೊಡೆತಕೆ ಉರುಳುತಲಿದ್ದವು ಗೋಪುರ
ರಕ್ಕಸರೆಲ್ಲರು ಯುದ್ಧದ ಸಿದ್ಧತೆ
ಮಾಡುವ ಮೊದಲೇ ಸುಗ್ರೀವನೆಂದ ॥ ೧೩೫ ॥

ವಾನರ ವೀರರೆ ಕೇಳಿರಿ ಎಲ್ಲರು
ಲಂಕೆಯ ಕೋಟೆಯ ದ್ವಾರಗಳೆಲ್ಲಕೆ
ಲಗ್ಗೆಯ ಹತ್ತಿರಿ ಮುತ್ತಿರಿ ಅವುಗಳ
ರಾಜನ ಆಜ್ಞೆಯು ತಪ್ಪಲು ಮರಣವು ॥ ೧೩೬ ॥

ಕೂಡಲೆ ವಾನರ ಸೇನೆಯು ಎದ್ದಿತು
ಎಲ್ಲರು ಹಿಡಿದರು ಪಂಜನು ಕೈಯಲಿ
ಕಂಡಿತು ಅದುವೇ ಪಂಜಿನ ಸಾಗರ
ಲಂಕೆಯ ಸುತ್ತಲು ಬೆಂಕಿಯ ಆಗರ ॥ ೧೩೭ ॥

ಮುತ್ತಿದರೆಲ್ಲರು ಲಂಕಾ ದ್ವಾರವ
ಕೇಳುತ ಸುದ್ದಿಯ ರಾವಣನೆದ್ದನು
ಕೆಂಡವ ಕಾರುತ ಘುಡುಘುಡಿಸುತ್ತಲಿ
ಪ್ರಳಯಕಾಲದ ರುದ್ರನು ಆದನು ॥ ೧೩೮ ॥

ಕುಂಭಕರ್ಣಜರು ಕುಂಭ ನಿಕುಂಭರ
ಕರೆಯುತ ಆಜ್ಞೆಯ ಕೊಟ್ಟನು ಅವರಿಗೆ
ಈಗಲೆ ರಾಕ್ಷಸ ಸೇನೆಯ ಸಹಿತದಿ
ಯುದ್ಧಕೆ ಹೋಗಿರಿ ನಿಲ್ಲದೆ ಇಲ್ಲಿಯೆ ‖ ೧೩೯ ‖

**ಮತ್ತೆ ಯುದ್ಧ ಪ್ರಾರಂಭ :**

ಪ್ರಜಂಘ ಕಂಪನ ಶೋಣಿತಾಕ್ಷರೂ
ಹೊರಟರು ಯುದ್ಧಕೆ ಯೂಪಾಕ್ಷ ಸಹಿತ
ರಭಸದಿ ಬಿದ್ದರು ಕಪಿಗಳ ಮೇಲೆಯೆ
ನಡೆಯಿತು ಕಾಳಗ ಭೀಕರ ರೂಪದಿ ‖ ೧೪೦ ‖

ಕಂಪನು ಬಂದನು ಅಂಗದನೆಡೆಗೆ
ಕೋಪದಿ ಹೊಡೆದನು ಗದೆಯನು ಎದೆಗೆ
ಅಂಗದ ಕುಸಿದನು ಹೊಡೆತಕೆ ಆಗಲೆ
ಕೂಡಲೆ ಚೇತನ ಹೊಂದುತ ಎದ್ದನು ‖ ೧೪೧ ‖

ಎತ್ತುತ ಶಿಖರವ ಕುಕ್ಕಿದ ಅವನನು
ಕಂಪನು ಬಿದ್ದನು ಅಸುವನು ನೀಗುತ
ಬಂದನು ಆಗಲೆ ಶೋಣಿತಾಕ್ಷನು
ರಥದಲಿ ಕೂಡಲೆ ಅಂಗದನೆಡೆಗೆ ‖ ೧೪೨ ‖

ಶೋಣಿತ ಬಂದನು ಬಿಡುತಲಿ ಶರಗಳ
ಕ್ಷುರ, ನಾರಾಚ, ಕ್ಷುರಪ್ರ, ವಿಪಾಠ
ಕರ್ಣಿ ಶಲ್ಯಗಳ ವತ್ಸ ದಂತವನು
ಬಿರುಸಿನ ಶರಗಳು ಬರುತಲಿ ಇದ್ದವು ‖ ೧೪೩ ‖

ಅಂಗದನ ಸಾಹಸ :

ಅಂಗದ ಬಂದನು ರೊಚ್ಚಿಗೆ ಆಗಲೆ
ಮುರಿದನು ಧನುವನು ರಥವದು ಪುಡಿಪುಡಿ
ರಕ್ಕಸ ನೆಗೆದನು ಗಗನದಿ ಮೇಲಕೆ
ಕತ್ತಿಯು ಗುರಾಣಿ ಹಿಡಿಯುತ ಕೂಡಲೆ ॥ ೧೪೪ ॥

ಅಂಗದ ನೆಗೆದನು ತಾನೂ ಮೇಲಕೆ
ಖಡ್ಗವ ಕಸಿದನು ರಕ್ಕಸನಿಂದಲಿ
ಕತ್ತಿಯ ಬೀಸುತ ಕತ್ತಿನ ಬದಿಯಲಿ
ಏಟನು ಕೊಡುತಲಿ ಸೀಳಿದ ಅವನನು ॥ ೧೪೫ ॥

ಆದರು ಶೋಣಿತ ಸಾಯಲೆ ಇಲ್ಲಾ
ಕಬ್ಬಿಣ ಗದೆಯನು ಹಿಡಿಯುತ ಶೋಣಿತ
ಅಟ್ಟುತ ಬಂದನು ಅಂಗದನೆಡೆಗೆ
ಯೂಪಾಕ್ಷ ಪ್ರಜಂಘ ಬಂದರು ಆಗಲೆ ॥ ೧೪೬ ॥

ಎಲ್ಲರು ಮುತ್ತುತ ಅಂಗದ ವೀರನ
ಏಟನು ಹಾಕುತಲಿದ್ದರು ಸುತ್ತಲು
ಅಂಗದ ಎದುರಿಸಿ ಮೂವರು ರಕ್ಕಸ
ವೀರರ ಎದುರಿಗೆ ಹೆಣಗಿದ ಅದ್ಭುತ ॥ ೧೪೭ ॥

ಅಂಗದ ಗುದ್ದಲು ಪ್ರಜಂಘ ತೋಳಿಗೆ
ಖಡ್ಗವು ಕಳಚಿತು ರಕ್ಕಸ ಕೆರಳಿದ
ಮುಷ್ಟಿಯ ಬಿಗಿಯುತ ವಜ್ರದ ತೆರದಲಿ
ಕೊಟ್ಟನು ಏಟನು ಅಂಗದ ತಲೆಗೆ ॥ ೧೪೮ ॥

ತತ್ತರಿಸುತ್ತಲೆ ಕುಸಿದನು ಅಂಗದ
ಕೂಡಲೆ ಚೇತನ ಹೊಂದುತ ಎದ್ದನು
ಬಿದ್ದಿಹ ಕತ್ತಿಯ ಎತ್ತುತ ಬೀಸಲು
ತರಿಯಿತು ಆದುವೇ ಪ್ರಜಂಘ ಶಿರವನು ॥ ೧೪೯ ॥

ಕಾಣುತ ಪ್ರಜಂಘ ಸಾವನು ಯುಪಾಕ್ಷ
ಉಕ್ಕಿತು ದುಃಖವು ಕಂಬನಿ ತುಂಬಿತು
ಶರಗಳು ತೀರಿವೆ ಮಾಡುವದೇನದು
ಕತ್ತಿಯ ಹಿರಿಯುತ ನುಗ್ಗಿದ ಮುಂದಕೆ ॥ ೧೫೦ ॥

ದ್ವಿವಿದನು ಬಂದನು ಯುಪಾಕ್ಷನೆದುರಿಗೆ
ಗುದ್ದುತ ಎದೆಯನು ಹಿಡಿದನು ಆಮುಕಿ
ಶೋಣಿತ ಕಾಣುತ ತಮ್ಮನ ಬಗೆಯನು
ಗದೆಯಿಂ ಹೊಡೆದನು ದ್ವಿವಿದನ ನೆತ್ತಿಗೆ ॥ ೧೫೧ ॥

ದ್ವಿವಿದನು ಕಿತ್ತಿದ ಶೋಣಿತ ಗದೆಯನು
ಮೈಂದನು ಕೊಟ್ಟನು ಮುಷ್ಟಿಯ ಏಟನು
ನಡೆಯಿತು ಕಾಳಗ ಶೋಣಿತ ದ್ವಿವಿದಗೆ
ಅಲ್ಲದೆ ಯುಪಾಕ್ಷ ಮೈಂದರ ನಡುವೆ ॥ ೧೫೨ ॥

ಕೊನೆಯಲಿ ದ್ವಿವಿದನು ಪರಚುತ ಮುಖವನು
ಎತ್ತುತ ಆವನನು ಮೇಲಕೆ ಒಮ್ಮೆಲೆ
ತಿರುಗಿಸಿ ಗಿರ್ರನೆ ಬಡಿದನು ಭೂಮಿಗೆ
ಶೋಣಿತ ನೆತ್ತರ ಕಾರುತ ಮಡಿದನು ॥ ೧೫೩ ॥

ಮೈಂದನು ಹಿಸುಕುತ ಯೂಪಾಕ್ಷನನ್ನು
ಕೊಲ್ಲುತ ಅವನನು ಬಿಸುಟನು ಅಲ್ಲಿಯೆ
ರಕ್ಕಸ ನಾಯಕರೆಲ್ಲರ ಹತ್ಯವ
ಕಾಣುತ ರಕ್ಕಸರೆಲ್ಲರು ಓಡುತ ॥ ೧೫೪ ॥

ಹೋದರು ಕುಂಭನ ರಕ್ಷಣೆ ಪಡೆಯಲು
ಕುಂಭನು ಆಗುತ ಸಿಟ್ಟಿನ ಪರ್ವತ
ಬಂದನು ಭೀಕರ ಶರಗಳ ಬಿಡುತಲಿ
ಬಾಣವ ಬಿಟ್ಟನು ದ್ವಿವಿದನ ಎದೆಗೆ ॥ ೧೫೫ ॥

ಪರ್ವತಪ್ರಾಯದ ದ್ವಿವಿದನು ಬಿದ್ದನು
ಮೂರ್ಛೆಯ ಹೊಂದುತ ಒರಗಿದ ನೆಲದಲಿ
ಕಾಣುತ ತಮ್ಮನ ಪರಿಯನು ಮೈಂದನು
ತೂರುತ ಬಂದನು ಬಂಡೆಗಳನವನು ॥ ೧೫೬ ॥

ಕುಂಭನು ಬಿಟ್ಟನು ಸರ್ಪದ ಬಾಣವ
ಮರ್ಮಸ್ಥಳದಲಿ ಹೊಡೆತವು ಬೀಳಲು
ಬಿದ್ದನು ಅವನೂ ಮೂರ್ಛೆಯ ಹೊಂದುತ
ಅಂಗದ ನೋಡಿದ ಇಬ್ಬರ ಗತಿಯನು ॥ ೧೫೭ ॥

ಸೋದರ ಮೂವರು ಬಿದ್ದರು ಇಬ್ಬರು
ಅಂಗದ ಬಂದನು ರಭಸದಿ ಎದುರಿಗೆ
ಕುಂಭನು ಬಿಟ್ಟನು ಹರಿತ ಬಾಣಗಳ
ಶರಗಳ ಮಳೆಯಲಿ ನುಗ್ಗಿದ ಅಂಗದ ॥ ೧೫೮ ॥

ಶರಗಳ ಹೊಡೆತಕೆ ಅಂಜದೆ ಅಂಗದ
ಸುಗ್ರೀವ ಪರಿಯನು ನೋಡುತ ಕುಂಭನು
ಹೊಡೆದನು ಬಾಣದಿ ಮರ್ಮಸ್ಥಳದಲಿ
ಅಂಗದ ಬಿದ್ದನು ಪ್ರಜ್ಞೆಯ ತಪ್ಪುತ || ೧೫೯ ||

ಓಡುತ ಹೋದರು ವಾನರರೆಲ್ಲರು
ತಿಳಿಸಿದರಾಗಲೆ ಕುಂಭನ ಪರಿಯನು
ರಾಮನು ಕಳಿಸಿದ ಜಾಂಬವಂತನನು
ಅಲ್ಲದೆ ಸುಷೇಣ ವೇಗದರ್ಶಿ ಸಹ || ೧೬೦ ||

ನುಗ್ಗಿದರೆಲ್ಲರು ಕುಂಭನ ಕಡೆಗೆ
ತಡೆದನು ರಕ್ಕಸ ಶರಗಳ ಜಾಲದಿ
ಅವರಿಗೆ ನುಗ್ಗಲು ಆಗದು ಮುಂದಕೆ
ವಾನರ ರಾಜನು ಬಂದನು ಅಲ್ಲಿಗೆ || ೧೬೧ ||

**ಸುಗ್ರೀವ-ಕುಂಭನ ಕಾಳಗ :**

ಅಂಗದ ರಕ್ಷಣೆ ಮಾಡಲು ಎದುರಿಗೆ
ನಿಂತನು ಕೂಡಲೆ ಸುಗ್ರೀವ ರಾಜ
ಕುಂಭನ ಶರಗಳ ಏಟಿಗೆ ಅಂಜದೆ
ಹೋಗುತ ಕಸಿದನು ಬಿಲ್ಲನು ಆಗಲೆ || ೧೬೨ ||

ಒಬ್ಬರನೊಬ್ಬರು ಎಳೆಯುತ ಕೂಡಲೆ
ಮಲ್ಲಯುದ್ಧದಲಿ ಸೆಣಸಲು ಇಬ್ಬರು
ಅದುರಿತು ಭೂಮಿಯು ಗರ್ಜನೆ ತುಂಬಿತು
ಉಕ್ಕಿತು ಸಾಗರ ಮದಗಜ ಕಾಳಗ || ೧೬೩ ||

ಸಿಟ್ಟಲಿ ವಾನರ ರಾಜನು ಎತ್ತುತ
ಎಸೆದನು ಕುಂಭನ ಸಾಗರ ಮಧ್ಯದಿ
ತೂರಿದ ರಭಸಕೆ ರಪ್ಪನೆ ಬೀಳುತ
ಮುಳುಗಿದ ರಕ್ಕಸ ಸಮುದ್ರದ ಒಳಗೆ ॥ ೧೬೪ ॥

ಬಂದನು ಕುಂಭನು ಕೂಡಲೆ ಏಳುತ
ಮುಷ್ಟಿಯ ಬಿಗಿಯುತ ಸುಗ್ರೀವನೆದೆಗೆ
ಕೊಟ್ಟನು ಅತಿಶಯ ಭೀಷಣ ಪ್ರಹಾರ
ಸೀಳಿತು ಎದೆಯಲಿ ಕವಚವು ಆಗಲೆ ॥ ೧೬೫ ॥

ರಕ್ತವು ಚಿಮ್ಮಿತು ರೋಷವು ಉಕ್ಕಿತು
ಮುಷ್ಟಿಯ ಕಟ್ಟುತ ವಜ್ರದ ತೆರದಲಿ
ಕೊಟ್ಟನು ಭೀಕರ ಏಟನು ಎದೆಯಲಿ
ಮೂಳೆಯು ಮುರಿಯಿತು ನೆತ್ತರ ಚಿಮ್ಮಿತು ॥ ೧೬೬ ॥

ಕಣ್ಣಿನ ಗುಡ್ಡೆಯು ಗಿರ್ರನೆ ತಿರುಗಿತು
ಕುಂಭನು ಬಿದ್ದನು ಅಸುವನು ನೀಗುತ
ರಕ್ಕಸ ಪಡೆಯಲಿ ಹಾಹಾಕಾರವು
ವಾನರ ಪಡೆಯಲಿ ಜಯಜಯಕಾರವು ॥ ೧೬೭ ॥

**ಹನುಮಂತ-ನಿಕುಂಭರ ಕಾಳಗ :**

ಅಣ್ಣನ ಸಾವನು ಕಾಣುತ ನಿಕುಂಭ
ಕೋಪದಿ ಉರಿಯುತ ದುರುದುರು ನೋಡುತ
ಪರಿಘವ ಎತ್ತುತ ಗಿರಿಗಿರಿ ತಿರುಗಿಸಿ
ಬಿಟ್ಟನು ನೇರಕೆ ಸುಗ್ರೀವನೆದೆಗೆ ॥ ೧೬೮ ॥

ಆದರೆ ಹನುಮನು ಬರುತಲಿ ನಡುವೆ
ಕೊಟ್ಟನು ತನ್ನಯ ಎದೆಯನು ಅದಕೆ
ಬಡಿಯುತ ಅಂಜನಿಕುವರನ ಎದೆಗೆ
ಬಿದ್ದಿತು ಕೆಳಗಡೆ ಪುಡಿಪುಡಿಯಾಗುತ ॥ ೧೬೯ ॥

ಪರಿಘದ ಹೊಡೆತಕೆ ತತ್ತರಿಸುತ್ತಲೆ
ಅದುರಿತು ಹನುಮನ ವಜ್ರದ ದೇಹವು
ನಡುಗಿತು ಭೂಮಿಯು ಬಿಗಿಯಿತು ಮುಷ್ಟಿಯು
ಕೊಟ್ಟನು ಏಟನು ನಿಕುಂಭನೆದೆಗೆ ॥ ೧೭೦ ॥

ಕವಚವು ಮುರಿಯಿತು ರಕ್ತವು ಚಿಮ್ಮಿತು
ಕುಸಿದನು ರಕ್ಕಸ ಕೂಡಡೆ ಎದ್ದನು
ಕೈಗಳ ಸುತ್ತುತ ಹನುಮನ ಸುತ್ತಲು
ಎತ್ತುತ ಅವನನು ನಡೆದನು ನಿಕುಂಭ ॥ ೧೭೧ ॥

ನೋಡುತ ಹನುಮನ ಒಯ್ಯುವ ಪರಿಯನು
ರಕ್ಕಸರೆಲ್ಲರು ಗರ್ಜನೆಗೈದರು
ಅಂಜನಿಕುವರನು ಕುಟ್ಟುತ ತಲೆಯನು
ಕೊಸರುತ ನೆಗೆದನು ಮೇಲಕೆ ಗಗನದಿ ॥ ೧೭೨ ॥

ಕೂಡಲೆ ಹನುಮನು ಇಳಿಯುತ ಭೂಮಿಗೆ
ಎತ್ತಿದ ರಕ್ಕಸ ವೀರನ ಕೂಡಲೆ
ಗಿರಿಗಿರಿ ತಿರುಗಿಸಿ ಕುಕ್ಕಿದ ನೆಲಕೆ
ರಕ್ಕಸ ಕಿರುಚಿದ ಭೈರವ ಸ್ವರದಲಿ ॥ ೧೭೩ ॥

ಹನುಮನು ಕೊಡುತ ರಕ್ಕಸನೆದೆಯಲಿ
ಹಿಸುಕಿದ ಕತ್ತನು ಕಿರಿಚುವ ಕುಂಭನ
ಕೈಗಳ ಕಾಲ್ಗಳ ಬೀಸುತ ರಕ್ಕಸ
ಒರಗಿದ ನೆಲದಲಿ ಅಸುವನು ನೀಗುತ || ೧೭೪ ||

ಮಕರಾಕ್ಷನ ಆಕ್ರಮಣ :

ಕುಂಭ ನಿಕುಂಭರ ಮರಣದ ಸುದ್ದಿಯ
ಕೇಳುತ ರಾವಣ ಆದನು ಚಿಂತಿಯು
ಕರೆಯುತ ಹರಸುತ ಮಕರಾಕ್ಷನನು
ಕಳಿಸಿದ ಕೊಲ್ಲಲು ರಾಮಲಕ್ಷ್ಮಣರ || ೧೭೫ ||

ಶೌರ್ಯದ ಹೆಮ್ಮೆಯ ಹೊಂದಿದ ಮಕರನು
ನಡೆದನು ಯುದ್ಧಕೆ ಸೈನ್ಯ ಸಮೇತ
ಹೇಳಿದನಾಗಲೆ ರಕ್ಕಸ ವೀರರೆ
ಯುದ್ಧವ ಮಾಡಿರಿ ಕಪಿಗಳ ಸಂಗಡ || ೧೭೬ ||

ರಾವಣನಾಜ್ಞೆಯು ಇರುವದು ಎನಗೆ
ಮೊದಲಿಗೆ ಕೊಲ್ಲಲು ರಾಮಲಕ್ಷ್ಮಣರ
ಕೊಲ್ಲುವೆ ಅವರನು ನಿಶ್ಚಯ ಮೊದಲು
ನಂತರ ಕೊಲ್ಲುವೆ ವಾನರ ವೀರರ || ೧೭೭ ||

ಭೇರಿಯ ಮದ್ದಲೆ ಶಂಖದ ಸಪ್ಪಳ
ತುಂಬಿತು ಗಗನವ ಗದ್ದಲ ಎಲ್ಲೆಡೆ
ಕೇಳುತ ಸಪ್ಪಳ ನೋಡುತ ಸೇನೆಯ
ವಾನರ ಸೇನೆಯು ಆಯಿತು ಸಿದ್ಧವು || ೧೭೮ ||

ರಕ್ಕಸರೆಲ್ಲರ ಆಯುಧವಿದ್ದವು
ಶಕ್ತಿ, ಖಡ್ಗ, ಗದೆ, ಕುಂತ, ತೋಮರವು
ಪಟ್ಟಿಸ, ಮುದ್ಗರ, ಭಿಂಡಿಪಾಲಗಳು
ಬಾಣ ಪಾಶಗಳು ಅಲ್ಲದೆ ದಂಡವು ॥ ೧೭೯ ॥

ಸಿಡಿಲಿನ ತೆರದಲಿ ಗುಡುಗುವ ಯಂತ್ರವು
ಮಕರನ ಶರಗಳ ಹೊಡೆತಕೆ ಎಲ್ಲರು
ವಾನರ ವೀರರು ಸರಿದರು ಹಿಂದಕೆ
ಓಡಿದರೆಲ್ಲರು ಇತರೇ ಕಪಿಗಳು ॥ ೧೮೦ ॥

ರಾಮನು ಸುರಿಸುತ ಶರಗಳ ಮಳೆಯನು
ತಡೆದನು ಆಗಲೆ ರಕ್ಕಸನಾರ್ಭಟೆ
ತಿರುಗಿತು ವಾನರ ಸೇನೆಯು ಮತ್ತೆ
ಮಕರನು ಗರ್ಜನೆಗೈದನು ಈ ತೆರ ॥ ೧೮೧ ॥

ದುರುಳನು ರಾಮನು ಇರುವದು ಎಲ್ಲಿ
ಎನ್ನಯ ತಂದೆಯ ಕೊಂದಿಹ ಅವನನು
ಕೊಲ್ಲುತ ಈಗಲೇ ನೆತ್ತರ ಹೀರುತ
ತರ್ಪಣ ಕೊಡುವೆನು ಸತ್ತಿಹ ತಂದೆಗೆ ॥ ೧೮೨ ॥

ಎನ್ನುತ ರಕ್ಕಸ ನುಗ್ಗಿದ ಮುಂದಕೆ
ತಡೆಯುತ ಅವನನು ವಾನರ ವೀರರು
ಕರೆದರು ಯುದ್ಧಕೆ ಆದರು ಅವನು
ನಿಲ್ಲದೆ ಹೊರಟನು ರಾಮನು ಇರುವೆಡೆ ॥ ೧೮೩ ॥

ಮಕರಾಕ್ಷನಿಂದ ರಾಮನಿಗೆ ಆಹ್ವಾನ:

ಹುಡುಕುತ ಆತನು ರಾಮಲಕ್ಷ್ಮಣರ
ಸೇನೆಯ ಮಧ್ಯದಿ ಕಂಡನು ಅವರನು
ಕೂಗುತ ಅಂದನು ರಾಮನೆ ನಿಲ್ಲು
ನಿನ್ನಯ ಜೊತೆಗೇ ಹೋರುವೆ ನಾನು || ೧೮೪ ||

ದಂಡಕ ವನದಲಿ ಎನ್ನಯ ತಂದೆಯ
ಕೊಂದಿಹ ನಿನ್ನನು ಮುಗಿಸುವೆ ಇಂದು
ನಿನ್ನಯ ಇಚ್ಛೆಯ ಯುದ್ಧವ ಮಾಡುವೆ
ಎಂತಹ ಯುದ್ಧದಿ ಪರಿಣತ ನೀನಿಹೆ || ೧೮೫ ||

ಅಸ್ತ್ರದಿಂದಲೋ ಗದೆಯಿಂದಲೋ
ಭುಜಬಲದಿಂದಲು ಆದರು ಸರಿಯೇ
ಬಿಡುವೆನು ನಿನಗೇ ಯುದ್ಧದ ರೀತಿಯ
ಸಿದ್ಧನು ಆಗೆಲೊ ಅಸುವನು ತೊರೆಯಲು || ೧೮೬ ||

ರಾಮನು ಅಂದನು ಮಾತಿನ ವೀರನೆ
ಯುದ್ಧದ ಸಮಯದಿ ಮಾತಿದು ಏತಕೆ
ಕಳಿಸುವೆ ನಿನ್ನನು ತಂದೆಯ ಹತ್ತಿರ
ಎನ್ನುತ ಬಿಟ್ಟನು ಶರಗಳ ಜಾಲವ || ೧೮೭ ||

ಆಯಿತು ಕಾಳಗ ಅದ್ಭುತ ತೆರದಲಿ
ಕರೆದರು ಬಾಣದ ಮಳೆಯನು ಬಾನಲಿ
ಒಬ್ಬನ ಶರಗಳ ಮುರಿಯುತ ಒಬ್ಬನು
ನುಗ್ಗುತಲಿದ್ದನು ಕೊಲ್ಲಲು ಮುಂದಕೆ || ೧೮೮ ||

ಕಾಲಾಗ್ನಿಯಂತೆ ಉರಿಯುವ ಶೂಲವ
ಬಿಟ್ಟನು ರಕ್ಕಸ ರಾಮನ ಮೇಲೆ
ರಾಮನು ಛೇದಿಸಿ ನಡುವೆಯೇ ಅದನು
ಕೆಡವಿದ ಭೂಮಿಗೆ ಅರೆನಿಮಿಷದಲಿ ‖ ೧೮೯ ‖

ಮುಷ್ಟಿಯ ಬಿಗಿಯುತ ಮಕರನು ಬಂದನು
ರಾಮನ ಕೊಲ್ಲಲು ಹೊಡೆಯಲು ಬಂದನು
ರಾಮನು ಬಿಟ್ಟನು ಅಗ್ನಿಯ ಅಸ್ತ್ರವ
ಸೀಳಿತು ಅದುವೇ ರಕ್ಕಸನೆದೆಯನು ‖ ೧೯೦ ‖

ಮಕರನ ದೇಹವು ಉರುಳಿತು ನೆಲಕೆ
ಗರ್ಜನೆಗೈದರು ಕಪಿಗಳು ಎಲ್ಲರು
ರಕ್ಕಸರೆಲ್ಲರು ಓಡುತ ಲಂಕೆಗೆ
ತಿಳಿಸಿದರಾಗಲೆ ಮಕರನ ಸುದ್ದಿಯ ‖ ೧೯೧ ‖

ಇಂದ್ರಜಿತುವು ಯುದ್ಧಕ್ಕೆ ಹೋಗಲು ರಾವಣನ ಆಜ್ಞೆ :

ಕೇಳುತ ಮಕರನ ಮರಣದ ಸುದ್ದಿಯ
ರಾವಣನಾದನು ಅತಿಶಯ ದುಃಖಿತ
ಹಾಗೆಯೆ ಉಕ್ಕಿತು ಕೋಪವು ಅವನಲಿ
ಕರೆಸಿದ ಆಗಲೆ ಇಂದ್ರಜಿತುವನು ‖ ೧೯೨ ‖

ಕೇಳೆಲೊ ಕುವರನೆ ರಾವಣಿ ನೀನಿಹೆ
ರಾಮಲಕ್ಷ್ಮಣರ ಕೊಲ್ಲುವ ಸಮಯವು
ಬಂದಿದೆ ಈಗಲೆ ಸಿದ್ಧನು ಆಗೆಲೊ
ಹೋದರು ಅತಿಬಲಶಾಲಿಗಳಾಗಲೆ ‖ ೧೯೩ ‖

ರಾಮಲಕ್ಷ್ಮಣರೊ ವೀರರು ಎನ್ನುತ
ಖ್ಯಾತರು ಆಗಿಹರೆಲ್ಲಿಡೆ ಈಗ
ಎದುರಿಗೆ ಯುದ್ಧವ ಮಾಡಿಯು ಸರಿಯೇ
ಮಾಯಾಯುದ್ಧವ ಮಾಡಿಯು ಸರಿಯೇ ॥ ೧೯೪ ॥

ನಿನ್ನಯ ಸರಿಸಮ ಇಲ್ಲವು ಅವರು
ಇಂದ್ರನ ಜಯಿಸಿಹ ಮಹಾಕಲಿ ನೀನು
ಮಾನವ ಮಾತ್ರರ ಲಕ್ಷ್ಯವು ಏನು
ತಂದೆಯ ಮಾತಿಗೆ ಒಪ್ಪುತ ನಡೆದನು ॥ ೧೯೫ ॥

**ಇಂದ್ರಜಿತುವಿನ ಯಾಗ ಹಾಗೂ ಯುದ್ಧದ ಸಿದ್ಧತೆ :**

ರಾವಣಿ ಹೋದನು ಯಜ್ಞಭೂಮಿಗೆ
ಯಜ್ಞವ ಮಾಡುವ ಸಂಕಲ್ಪ ಮಾಡಿ
ಕರೆಸಿದ ಋತ್ವಿಜರೆಲ್ಲರ ಅಲ್ಲಿಗೆ
ತಂದರು ಕೆಂಪಿಹ ಮುಂಡಾಸ ಕೂಡ ॥ ೧೯೬ ॥

ತಂದರು ತೋಮರ ಅಲ್ಲದೆ ಆಯುಧ
ಹುಲ್ಲನು ತಂದರು ಸಮಿತ್ತು ಕೂಡಾ
ಕೆಂಪಿಹ ಬಟ್ಟೆಯು ಕಬ್ಬಿಣ ಸ್ರುವವು
ಅಗ್ನಿಯ ಜ್ವಲಿಸುತ ಆವಾಹನೆಯಲಿ ॥ ೧೯೭ ॥

ಕಪ್ಪಿನ ಬಣ್ಣದ ಸಜೀವ ಮೇಕೆಯ
ಕತ್ತನು ಹಿಸುಕುತ ಅಗ್ನಿಯಲಿಡುತಲಿ
ಹೋಮವ ಮಾಡಿದ ವಿಧಿಯಲಿ ತಪ್ಪದೆ
ಅಗ್ನಿಯು ಕಂಡನು ಯಜ್ಞದ ಕುಂಡದಿ ॥ ೧೯೮ ॥

ಮೇಲಕೆ ಏಳುತ ಹವಿಸನು ಪಡೆದನು
ಸುತ್ತಲು ಇದ್ದಿತು ಸುವರ್ಣ ಜ್ವಾಲೆಯು
ಯಜ್ಞವು ಫಲಿಸಿತು ಸಿದ್ಧಿಯು ಬಂದಿತು
ಕಣ್ಣಿಗೆ ಕಾಣದ ರಥವನು ಏರಿದ || ೧೯೯ ||

ಎಳೆಯುತಲಿದ್ದವು ಹಯಗಳು ನಾಲ್ಕು
ತೀಕ್ಷ್ಣದ ಅಸ್ತ್ರಗಳೆಲ್ಲವು ಇದ್ದವು
ಭೀಕರ ಧನುವದು ತೂಗುತಲಿದ್ದಿತು
ರಥವದು ಇದ್ದಿತು ಸುಂದರ ವಿಶಾಲ || ೨೦೦ ||

ಮೇಘನಾದನೋ ಮೆರೆದನು ಅದರಲಿ
ರಕ್ಷಿತನಿದ್ದನು ಬ್ರಹ್ಮಾಸ್ತ್ರದಿಂದ
ಕಣ್ಣಿಗೆ ಕಾಣದೆ ಯುದ್ಧವ ಮಾಡುವ
ಮಂತ್ರವ ಸಿದ್ಧಿಸಿ ಹೊರಟನು ಯುದ್ಧಕೆ || ೨೦೧ ||

ಕಪಟದ ತಾಪಸ ರೂಪವ ಧರಿಸಿದ
ರಾಮಲಕ್ಷ್ಮಣರ ವಧಿಸುತ ಅಲ್ಲದೆ
ಕಪಿಗಳ ಸೇನೆಯು ಕೊಬ್ಬನು ಕರಗಿಸಿ
ತಂದೆಗೆ ನೀಡುವೆ ಅಮಿತಾನಂದವ || ೨೦೨ ||

**ಇಂದ್ರಜಿತುವಿನ ಮಾಯಾಯುದ್ಧ :**

ಎನ್ನುತ ಆದನು ಅದೃಶ್ಯನಾಗ
ಮಿಂಚಿನ ವೇಗದಿ ಶರಗಳ ಬಿಡುತಲಿ
ಸುರಿಸಿದ ಕೋಲ್ಗಳ ಮಳೆಯನು ಆಗಲೆ
ರಾಮಲಕ್ಷ್ಮಣರು ಬಾಣವ ಬಿಟ್ಟರು || ೨೦೩ ||

ಗಗನವು ತುಂಬಿತು ಶರಗಳ ಜಾಲದಿ
ಆದರೆ ರಕ್ಕಸ ಕಾಣನು ಯಾರಿಗು
ಬಾಣವು ತಾಗಲೆ ಇಲ್ಲವು ಅವನಿಗೆ
ರಕ್ಕಸ ಬಾಣಕೆ ಬಿದ್ದರು ಕಪಿಗಳು ॥ ೨೦೪ ॥

ಮಾಯಾ ರೀತಿಯ ಹೊಗೆಯನು ಹುಟ್ಟಿಸಿ
ಗಗನವ ತುಂಬಿಸಿ ಮಂಜನು ಮುಸುಕಿಸಿ
ಕತ್ತಲೆ ತೆರದಲಿ ದಿನವನು ಮಾಡುತ
ಶರಗಳ ಸುರಿದನು ಕ್ರೂರನು ಆಗಿ ॥ ೨೦೫ ॥

ಝುಂಕಾರವಂತೂ ಕೇಳದು ಎಷ್ಟೂ
ರಥದ ಸಪ್ಪಳವು ಇಲ್ಲವೆ ಇಲ್ಲಾ
ಕುದುರೆಯ ಖುರಪುಟ ಕೇಳದು ಎನಿತೂ
ಶರಗಳು ಬರುತಿವೆ ಮಿಂಚಿನ ವೇಗದಿ ॥ ೨೦೬ ॥

ಶರಗಳು ಬರುತಿಹ ದಿಕ್ಕನು ಊಹಿಸಿ
ಶರಗಳ ಬಿಡುತಲಿ ರಾಮಲಕ್ಷ್ಮಣರು
ತಿರುಗುತಲಿದ್ದರು ಸುತ್ತಲು ಅವರು
ಆದರು ಕಾಣನು ರಕ್ಕಸ ವೀರನು ॥ ೨೦೭ ॥

**ಲಕ್ಷ್ಮಣನ ಕೋಪ :**

ಸಿಟ್ಟಲೆ ಲಕ್ಷ್ಮಣ ಹಿರಿದನು ಅಸ್ತ್ರವ
ಅಣ್ಣನೆ ಬಿಡುವೆನು ಬ್ರಹ್ಮಾಸ್ತ್ರವನು
ಕೊಲ್ಲುವೆ ರಕ್ಕಸರೆಲ್ಲರ ಒಮ್ಮೆಲೆ
ತಡೆಯುವೆ ಕಪಿಗಳ ಹತ್ಯೆಯ ಕೂಡಲೆ ॥ ೨೦೮ ॥

ಶ್ರೀರಾಮನಿಂದ ಯುದ್ಧ ನೀತಿಯ ವಿವರಣೆ :

ರಾಮನು ಎಂದನು ತಡೆತಡೆ ಲಕ್ಷ್ಮಣ
ಒಬ್ಬನಿಗೋಸುಗ ಎಲ್ಲರ ಕೊಲ್ಲುವ
ನೀತಿಯು ಅಲ್ಲವು ಶುದ್ಧವು ನಿಜಕೂ
ಯುದ್ಧದ ನೀತಿಯ ಮರೆತೆಯಾ ಈಗ || ೨೦೯ ||

ಯುದ್ಧವ ಮಾಡದೆ ಭಯದಲಿ ಅಡಗಿಹ
ಕೈಗಳ ಜೋಡಿಸಿ ನಮಿಸುತಲಿರುವವ
ಶರಣಾಗತನನು ಹೆದರುತ ಓಡುವ
ಅಲ್ಲದೆ ಮೈಮರೆತಿರುವವನನ್ನೂ || ೨೧೦ ||

ವಧಿಸಲು ಬಾರದು ಇದುವೇ ನೀತಿಯು
ಯತ್ನವ ಮಾಡುವ ಕೊಲ್ಲಲು ಅವನನು
ಮಾಯಾ ಬಲದಲಿ ಕಾಣನು ಅವನು
ಕಂಡರೆ ಕಪಿಗಳೆ ಕೊಲ್ಲುವರವನನು || ೨೧೧ ||

ಭೂಮಿಯಲಡಗಲಿ ಸ್ವರ್ಗಕೆ ಏರಲಿ
ನಭದಲಿ ನಿಲ್ಲಲಿ ಎಲ್ಲೇ ಇರಲಿ
ಕೊಲ್ಲುವೆ ಅವನನು ಶಾಂತನು ಆಗು
ಎನ್ನಲು ಲಕ್ಷ್ಮಣ ಆದನು ಶಾಂತನು || ೨೧೨ ||

ರಾಮನ ಬಿರುಸಿನ ಶರಗಳ ನೋಡುತ
ರಾವಣಿ ಹೋದನು ಲಂಕೆಯ ಒಳಗಡೆ
ಯುದ್ಧವ ನಿಲ್ಲಿಸಿ ಯಾರಿಗು ತಿಳಿಯದೆ
ಕೂಡಲೆ ಬಂದನು ಪಶ್ಚಿಮ ದ್ವಾರಕೆ || ೨೧೩ ||

ಇಂದ್ರಜಿತುವಿನಿಂದ ಮಾಯಾ ಸೀತೆಯ ನಿರ್ಮಾಣ :

ಯೋಜನೆ ಮಾಡಿದ ಮಾಯಾ ಆಟವ
ಮಾಯಾ ಸೀತೆಯ ನಿರ್ಮಿಸಿ ಆತನು
ತಂದನು ರಥದಲಿ ಗಗನದಿ ಆಗಲೆ
ದುಃಖದಿ ಅಳುತಿಹ ಸೀತೆಯು ಅದರಲಿ || ೨೧೪ ||

ಹನುಮನು ನೋಡಿದ ದುಃಖಿತ ಸೀತೆಯ
ಕ್ಷಣದಲಿ ನಿಂತನು ನೋಡುತ ಅಲ್ಲಿಯೆ
ತಿಳಿಸಿದ ಕಪಿವರರೆಲ್ಲರಿಗಾಗಲೆ
ಅವಳೇ ಸೀತೆಯು ಇರುವಳು ಎಂದು || ೨೧೫ ||

ನೋಡುತ ಕಪಿಗಳ ದುಃಖದ ಪರಿಯನು
ರಾವಣಿ ಹಿಡಿಯುತ ತುರುಬನು ಎಳೆದನು
ರಾಮಾರಾಮಾ ಎನ್ನುತ ಕೂಗುವ
ಸೀತೆಯ ಶಿರವನು ತರಿದನು ಆಗಲೆ || ೨೧೬ ||

ಬಿದ್ದಿತು ದೇಹವು ನೆತ್ತರ ಚಿಮ್ಮುತ
ಗರ್ಜನೆ ಮಾಡುತ ರಾವಣಿಯೆಂದನು
ಏನೆಲೊ ಹನುಮನೆ ಸುಗ್ರೀವ ನೀನು
ನಿಮ್ಮಯ ಯುದ್ಧವು ಸಾರ್ಥಕವೇನು || ೨೧೭ ||

ಕೊಂದಿಹೆ ಎದುರಿಗೆ ಸೀತೆಯನೀಗಲೆ
ಕೊಲ್ಲುವೆ ಕಪಿಗಳನೆಲ್ಲರ ಇಲ್ಲಿಯೆ
ಎನ್ನುತ ಬಿಟ್ಟನು ಶರಗಳ ಭರದಲಿ
ಚದುರಿದರೆಲ್ಲರು ಕಪಿಗಳು ಆಗಲೆ || ೨೧೮ ||

ಹನುಮಗೆ ಬಂದಿತು ಕ್ರೋಧವು ದುಃಖವು
ತಡೆದನು ಓಡುವ ಕಪಿಗಳ ಆಗಲೆ
ಬೀಸಿದ ಭೀಕರ ಬಂಡೆಯು ರಥಕೆ
ಸಾರಥಿ ತ್ವರಿತದಿ ಒಯ್ದನು ರಥವನು || ३೧೯ ||

ರಾವಣಿ ತಿರುಗಿದ ಲಂಕೆಗೆ ಆಗಲೆ
ಹೋಮವ ಮಾಡಲು ನಿಕುಂಭಿದೇವಿಗೆ
ಅಗ್ನಿಯ ಸ್ಥಾಪಿಸಿ ಹೋಮವ ಮಾಡಿದ
ನೈತ್ರರ ಅರ್ಪಿಸಿ ಸಿದ್ಧಿಯ ಪಡೆಯಲು || ३३೦ ||

ಹನುಮನು ಹೊರಟನು ರಾಮನ ಕಡೆಗೆ
ಸುದ್ದಿಯ ತಿಳಿಸಲು ಸೀತೆಯ ವಧೆಯ
ಇಲ್ಲಿಯ ಕೋಲಾಹಲವನು ತಿಳಿಯುತ
ರಾಮನು ಅಂದನು ಜಾಂಬವ ನೋಡು || ३३೧ ||

ಹನುಮನ ಕಡೆಯಲಿ ಕೋಲಾಹಲವಿದೆ
ಭೈರವ ಧ್ವನಿಯೂ ಕೇಳುತಲಿರುವದು
ನಿನ್ನಯ ಸೇನೆಯ ಒಯ್ಯುತ ಅಲ್ಲಿಗೆ
ನೆರವನು ನೀಡೈ ಕಪಿವರ ಹನುಮಗೆ || ३३३ ||

ಕೂಡಲೆ ಜಾಂಬವ ಸೈನ್ಯ ಸಮೇತದಿ
ಹೊರಟನು ಪಶ್ಚಿಮ ದ್ವಾರದ ಕಡೆಗೆ
ನಡುವೆಯೆ ಕಂಡನು ಆತನು ಹನುಮನ
ಹನುಮನು ನಡೆದನು ರಾಮನ ಕಡೆಗೆ || ३३೩ ||

ಸೀತೆಯ ವಧೆಯ ಸುದ್ದಿಯನ್ನು ಹನುಮಂತನು ರಾಮನಿಗೆ ಹೇಳಿದುದು :

ರಾಮನೆ ಎಮ್ಮಯ ಎದುರಿಗೆ ರಾವಣಿ
ತರಿದನು ಸೀತೆಯ ಶಿರವನು ನೋಡಿದೆ
ಭ್ರಾಂತನು ಆಗಿಹೆ ಏನೂ ತಿಳಿಯದು
ಸುದ್ದಿಯ ತಿಳಿಸಲು ಬಂದೆನು ಇಲ್ಲಿಗೆ || ೨೨೪ ||

ಕೇಳುತ ಈ ನುಡಿ ಬವಳಿಯು ಬರುತಲಿ
ಬಿದ್ದನು ರಾಮನು ಎಚ್ಚರ ತಪ್ಪುತ
ನೆರೆದರು ಕಪಿಗಳು ಸುತ್ತಲು ಎಲ್ಲರು
ಆದರು ಮುಟ್ಟರು ಯಾರೂ ಅವನನು || ೨೨೫ ||

ನಿರಾಶೆಯ ಸಮಯದಲ್ಲಿ ಲಕ್ಷ್ಮಣನ ಉದ್ಗಾರ :

ದುಃಖದ ಭರದಲಿ ಲಕ್ಷ್ಮಣ ಬಂದನು
ಅಣ್ಣನ ಅಪ್ಪುತ ಈ ಪರಿ ಅಂದನು
ಸದಾಚಾರಿಯೂ ಜಿತೇಂದ್ರಿಯಾಗಿ
ಇದ್ದರು ನಿನ್ನನು ಧರ್ಮವು ಬಿಟ್ಟಿತು || ೨೨೬ ||

ಜಗದಲಿ ಧರ್ಮವು ನಿರರ್ಥಕವಿಹುದು
ನಿಜಕೂ ಧರ್ಮವು ಇಲ್ಲವೆ ಇಲ್ಲಾ
ಸ್ಥಾವರ ರೀತಿಯ ವೃಕ್ಷವು ಅಲ್ಲದೆ
ಜಂಗಮ ರೀತಿಯ ಪ್ರಾಣಿಗಳಿಲ್ಲವು || ೨೨೭ ||

ಸುಖದಲಿ ಇರುವವು ತಿಳಿದರೆ ನಿಜಕೂ
ಸುಖಕದು ಧರ್ಮವು ಬೇಕೇ ಇಲ್ಲವು
ಸುಖಕೆ ಧರ್ಮವೂ ಅಧರ್ಮಕೆ ದುಃಖ
ಎನ್ನುವ ಮಾತದು ನಿಜವೇ ಅಲ್ಲವು || ೨೨೮ ||

ಧರ್ಮದ ಮೂರುತಿಯಾಗಿಹ ಅಣ್ಣಗೆ
ಸುಖವದು ಎನಿತೂ ಇಲ್ಲವೆ ಇಲ್ಲವು
ಧರ್ಮವೆ ಇಲ್ಲದ ರಾವಣ ಮಾತ್ರ
ಸುಖದಲಿ ತೇಲುತಲಿರುವನು ಅಲ್ಲವೆ ॥ ೨೨೯ ॥

ಧರ್ಮವು ಆಗಿದೆ ಅಧರ್ಮ ಮಾತ್ರ
ಅಧರ್ಮವಾಗಿದೆ ಧರ್ಮವು ಅಲ್ಲವೆ
ಎರಡೂ ಕೊಡುತಿವೆ ವಿರುದ್ಧ ಫಲಗಳ
ಇಲ್ಲವೆ ದೈವದ ಆಟವು ಇರುವದೆ ॥ ೨೩೦ ॥

ದೈವವು ಅಧಿಕವೆ ಪೌರುಷ ಅಧಿಕವೆ
ಕೇವಲ ದೈವಕೆ ಶರಣನು ಆಗಲು
ಹೇಡಿಯು ಮಾತ್ರವೆ ಯೋಗ್ಯನು ಅಲ್ಲವೆ
ಪೌರುಷವೊಂದೇ ಮಾರ್ಗವು ನಿಜಕೂ ॥ ೨೩೧ ॥

**ವಿಭೀಷಣನಿಂದ ಭ್ರಮನಿರಸನ ಹಾಗೂ ಸಲಹೆ :**

ವಿಭೀಷಣನಾಗ ಬಂದನು ಅಲ್ಲಿಗೆ
ಲಕ್ಷ್ಮಣ ತೊಡೆಯಲಿ ರಾಮನು ತಲೆಯನು
ಇಡುತಲಿ ಮಲಗಿಹ ವ್ಯೆಮರೆಯುತ್ತಲಿ
ಲಕ್ಷ್ಮಣ ಹೇಳಿದ ಸೀತೆಯು ವಧೆಯನು ॥ ೨೩೨ ॥

ಕೂಡಲೆ ಅಂದನು ವಿಭೀಷಣನಾಗ
ಇರುವದು ಎಲ್ಲವು ಮಾಯಾಜಾಲವು
ಸೀತೆಯ ಕೊಲ್ಲಲು ರಾವಣ ಬಿಡನು
ಗೊತ್ತಿದೆ ಎನಗೂ ರಾವಣ ಮನವು ॥ ೨೩೩ ॥

ಭ್ರಮೆಯಲಿ ಕೆಡಹುತ ನಿಮ್ಮನು ಎಲ್ಲರ
ಹೋಗಿಹ ರಾವಣಿ ನಿಕುಂಭಿಳೆ ಗುಡಿಗೆ
ಆಭಿಚಾರಿಕದ ಹೋಮವ ಮಾಡಲು
ಮಾಡಿದನಾದರೆ ಅಜೇಯನಾಗುವ ॥ ೨೩೪ ॥

ಹೋಮದ ಕಾರ್ಯಕೆ ವಿಘ್ನವು ಬಾರದೆ
ಪೂರ್ತಿಯ ಮಾಡಲು ಹೂಡಿದ ಆಟವು
ನಂಬಲೆ ಬೇಡಿರಿ ಸೀತೆಯ ವಧೆಯನು
ಕೂಡಲೆ ಹೋಗಿರಿ ಹೋಮವ ಕೆಡಿಸಲು ॥ ೨೩೫ ॥

ಎಚ್ಚರ ತಳೆದಿಹ ರಾಮಗೆ ಅಂದನು
ರಾಘವ ಶ್ರೇಷ್ಠನೆ ಲಕ್ಷ್ಮಣನೊಡನೆಯೆ
ಸೈನ್ಯವ ಕಳುಹಿಸು ಹೋಮವ ಕೆಡಿಸಲು
ಇಲ್ಲದೆ ಹೋದರೆ ರಾವಣಿ ಅಜೇಯ ॥ ೨೩೬ ॥

ಆಗಲೆ ಸೇನೆಯ ವ್ಯೂಹವ ರಚಿಸುತ
ನಿಲ್ಲಿಸಿ ಬಿಟ್ಟಿಹೆ ಚಿಂತೆಯು ಬೇಡಾ
ನೀನೇ ಶೋಕಿಸಿ ದುಃಖಿತನಾದರೆ
ಕಪಿಗಳ ಗತಿಯನು ಕೇಳುವರಾರದು ॥ ೨೩೭ ॥

ಕೂಡಲೆ ಕಳುಹಿಸು ಲಕ್ಷ್ಮಣನನ್ನು
ಅವನೇ ಕೊಲ್ಲುವ ಇಂದ್ರಜಿತುವನು
ಬ್ರಹ್ಮನ ಮೆಚ್ಚಿಸಿ ವರವನು ಪಡೆದಿಹ
ಬ್ರಹ್ಮ ಶಿರವೆಂಬ ಅಸ್ತ್ರವ ಹೊಂದಿಹ ॥ ೨೩೮ ॥

ಇಚ್ಛಿಸಿದಂತೆಯೇ ಓಡುವ ಹಯಗಳ
ರಥವನು ಹೊಂದಿಹ ರಾವಣಿ ಇಂದು
ಈಗಿದ ಹೋಮದಿ ಸಿದ್ಧಿಯ ಪಡೆದರೆ
ಆಯಿತು ಎಲ್ಲರ ಮರಣವು ನಿಶ್ಚಿತ || ೨೩೯ ||

ಹೋಮವು ಪೂರ್ತಿಯು ಆಗದ ಸಮಯದಿ
ಅಸ್ತ್ರವ ಧರಿಸುತ ಯುದ್ಧವ ಮಾಡಲು
ಮರಣವು ನಿಶ್ಚಿತ ಅವನಿಗೆ ಎನ್ನುವ
ವರದಲಿ ಇರುತಿಹ ಗುಟ್ಟನು ತಿಳಿ ನೀ || ೨೪೦ ||

**ಲಕ್ಷ್ಮಣನಿಗೆ ಇಂದ್ರಜಿತುವಿನ ಹೋಮ ಕೆಡಿಸಲು ಆಜ್ಞೆ :**

ರಾಮನು ಎಂದನು ಒಲ್ಲೆನು ನಾನು
ರಾವಣಿ ಇರುವನು ಬ್ರಹ್ಮಾಸ್ತ್ರ ಧಾರಿ
ಮಾಯಾವಿಯಲ್ಲದೆ ಬಲಾಢ್ಯ ಕೂಡಾ
ಗಗನದಿ ಚಲಿಸುವ ಗತಿಯೇ ತಿಳಿಯದು || ೨೪೧ ||

ಲಕ್ಷ್ಮಣ ಈಗಲೆ ಹೊರಡೆಲೊ ನೀನು
ಸುಗ್ರೀವಸೇನೆ ಹನುಮನು ಜಾಂಬವ
ಅಲ್ಲದೆ ಕಪಿಬಲ ಸಹಿತದಿ ಹೊರಡು
ಹೋಮವು ಪೂರ್ತಿಯು ಆಗದ ತೆರದಲಿ || ೨೪೨ ||

ಯುದ್ಧವ ಮಾಡುತ ವಧಿಸೆಲೊ ಅವನನು
ವಿಭೀಷಣ ಮಾತ್ರ ಬಲ್ಲನು ತಾಣವ
ಲಕ್ಷ್ಮಣ ನಮಿಸುತ ಅಣ್ಣನ ಪಾದಕೆ
ನಡೆದನು ಯುದ್ಧಕೆ ಕಪಿಬಲ ಸಹಿತ || ೨೪೩ ||

ಕಂಡಿತು ರಕ್ಕಸ ಸೇನೆಯು ಎದುರಲಿ
ನಿಂತಿದೆ ಕಷ್ಟನ ನೋಡದ ತೆರದಲಿ
ಅಭೇದ್ಯ ಅಜಿಂಕ್ಯ ಸಿದ್ಧತೆಯಲ್ಲಿಯೆ
ಲಕ್ಷ್ಮಣ ಬಂದನು ಆಗಲೆ ಅಲ್ಲಿಗೆ ॥ ೩೪೪ ॥

ವಿಭೀಷಣನೆಂದ ನೋಡೈ ಲಕ್ಷ್ಮಣ
ವ್ಯೂಹದಿ ನಿಂತಿದೆ ರಕ್ಕಸ ಸೇನೆಯು
ಭೇದಿಸು ವ್ಯೂಹವ ಕೂಡಲೆ ನೀನು
ಅಂದರೆ ಸಿಗುವನು ರಾವಣಿ ಒಳಗಡೆ ॥ ೩೪೫ ॥

ಕೇಳುತ ಈ ನುಡಿ ಲಕ್ಷ್ಮಣನಾಗಲೆ
ಸುರಿಸಿದ ಶರಗಳ ಮಳೆಯನು ಎಲ್ಲೆಡೆ
ವಾನರ ವೀರರು ರಭಸದಿ ಮುತ್ತುತ
ಕೊಂದರು ರಕ್ಕಸ ಭಟರನು ಎಷ್ಟೋ ॥ ೩೪೬ ॥

ರಕ್ಕಸ ಸೈನಿಕರೆಲ್ಲರು ಕೂಡಲೆ
ಭೀಕರ ಯುದ್ಧವಗೈದರು ಆಗಲೆ
ತಮ್ಮಯ ರಾಜನ ರಕ್ಷಣೆಗೆಂದು
ಕಾದುತಲಿದ್ದರು ಭೀಕರ ರೂಪದಿ ॥ ೩೪೭ ॥

ಎಸೆಯುವ ತೂರುವ ಭೀಕರ ಶರಗಳ
ಶಸ್ತ್ರದ ಅಸ್ತ್ರದ ಸಪ್ಪಳದಿಂದಲಿ
ತುಂಬಿತು ಲಂಕೆಯು ಗಗನವು ಕೂಡಾ
ಕಂಡಿತು ಎಲ್ಲೆಡೆ ಶರಗಳ ಜಾಲವು ॥ ೩೪೮ ॥

ವ್ಯೂಹವು ಮುರಿಯಿತು ವಾನರ ವೀರರು
ನುಗ್ಗಿದರಂತೆಯೆ ಸೇನೆಯ ಮಧ್ಯದಿ
ಲಕ್ಷ್ಮಣ ಬರುತಲಿ ರಭಸದಿ ಒಳಗಡೆ
ನಿಂತನು ರಾವಣಿ ಎದುರಿಗೆ ಆತನು || ೨೪೯ ||

ಹೋಮವ ಮುಗಿಸದೆ ರಾವಣಿ ಎದ್ದನು
ಮರಗಳ ಮರೆಯಿಂ ಹೊರಗಡೆ ಬರುತಲಿ
ಏರಿದ ರಥವನು ನಿಂತಿಹ ಅಲ್ಲಿಯೆ
ಹಿಡಿದನು ಭೀಕರ ಬಿಲ್ಲನು ಕೈಯಲಿ || ೨೫೦ ||

ಆಗಲೆ ನಡೆದದು ಹನುಮನು ರಭಸದಿ
ಬೆಳೆಸಿಹ ದೇಹವ ಪರ್ವತಪ್ರಾಯದಿ
ಬೀಸುತ ನಡೆದನು ಗಿಡವನು ಸುತ್ತಲು
ಬಡಿಯುತ ಕೊಲ್ಲುತ ರಾಕ್ಷಸ ಸೇನೆಯ || ೨೫೧ ||

ತಡೆದರು ಅವನನು ರಕ್ಕಸರೆಲ್ಲರು
ಹಿಡಿದಿಹರೆಲ್ಲರು ವಿಧವಿಧ ಆಯುಧ
ಉಕ್ಕಿನ ಮುದ್ಗರ ಘೋರ ಕೊಡಲಿಯನು
ಪರಿಘ ಗದೆ ಚಕ್ರ ಶತಘ್ನಿಯನೂ || ೨೫೨ ||

**ಹನುಮಂತನ ಹಾವಳಿ :**

ಭಿಂಡಿ ಪಾಲದಿಂ ಹೊಡೆಯುತ ಕೆಲವರು
ವಜ್ರದ ಮುಷ್ಟಿಯ ಏಟನು ಬಿಟ್ಟರು
ಸುತ್ತಲು ಮುತ್ತಿದ ರಕ್ಕಸರೆಲ್ಲರ
ತುಳಿಯುತ ತರಿಯುತ ಹನುಮನು ಆಗ || ೨೫೩ ||

ಕಂಡನು ಭೀಕರ ಯಮನೇ ಅವರಿಗೆ
ಬಾಲದಿ ಸುತ್ತುತ ರಕ್ಕಸ ಭಟರನು
ಹಿಸುಕುತ ಕೊಲ್ಲುತ ಮೇಲಕೆ ಎತ್ತುತ
ತೂರುತಲಿದ್ದನು ರಕ್ಕಸ ಹೆಣಗಳ ॥ ೨೫೪ ॥

ಹೆಣದಿಂ ತುಂಬಿದ ಸಾಗರ ತೀರವು
ಜಲಚರ ವನಚರ ಎಲ್ಲಕೆ ಹಬ್ಬವು
ನೋಡುತ ರಕ್ಕಸ ನಾಶವ ರಾವಣಿ
ಅಂದನು ಏನಿದು ಕಪಿಯುದು ರಭಸವು ॥ ೨೫೫ ॥

ಬಿಟ್ಟರೆ ಹೀಗೆಯೆ ಕೊಲ್ಲುವದೆಲ್ಲರ
ಎನ್ನುತ ಸಾರಥಿಗಾಗಲೆ ಹೇಳಿದ
ಒಯ್ಯಲೊ ರಥವನು ಹನುಮನ ಕಡೆಗೆ
ನೋಡುವೆ ಹನುಮನ ಶಕ್ತಿಯನೀಗಲೆ ॥ ೨೫೬ ॥

ಬರುತಲಿ ನೇರಕೆ ಹನುಮನ ತಲೆಗೆ
ಬಿಟ್ಟನು ಪಟ್ಟಿಸ ಪರಶ್ವಧಾದಿಯ
ಭೀಕರ ಏಟಿನ ಹೊಡೆತಕೆ ಅಂಜದೆ
ಹನುಮನು ಗರ್ಜಿಸಿ ಅಂದನು ಈ ಪರಿ ॥ ೨೫೭ ॥

ಖೂಳನೆ ರಾವಣ ಪುತ್ರನೆ ನೀನು
ಶೂರನು ಇದ್ದರೆ ಎದುರಿಗೆ ಕಾಣು
ಹೇಡಿಯ ತೆರದಲಿ ಕಣ್ಣಿಗೆ ಕಾಣದೆ
ಯುದ್ಧವ ಮಾಡುವ ಪೌರುಷವಾವುದು ॥ ೨೫೮ ॥

ಅನಿಲನ ಕುವರನು ಬಂದಿಹೆ ನಾನು
ಎದುರಿಸಿ ಗೆದ್ದರೆ ಒಪ್ಪುವೆ ನಿನ್ನನು
ಎನ್ನಲು ರಾವಣಿ ಮಾಯಾ ರೂಪದಿ
ಬಂದನು ಹನುಮನ ಕೊಲ್ಲಲು ಆಗಲೆ || ೨೫೯ ||

**ವಿಭೀಷಣನ ಸಲಹೆ :**

ನೋಡುತ ಈ ಪರಿ ವಿಭೀಷಣನಾಗ
ಲಕ್ಷ್ಮಣ ನೋಡೈ ರಾವಣಿ ಬಂದಿಹ
ಇದುವೇ ಸಮಯವು ಕೊಲ್ಲಲು ಅವನನು
ಕಂಡನು ಲಕ್ಷ್ಮಣ ಗರ್ಜಿಪ ರಾವಣಿ || ೨೬೦ ||

ನಡೆದನು ಲಕ್ಷ್ಮಣ ವಿಭೀಷಣ ಸಹಿತ
ಸೇರಿದರಲ್ಲಿಯೇ ನಿಕುಂಭಿಳೆ ವನವ
ನೋಡಿದರಲ್ಲಿಯೆ ಆಲದ ಮರವನು
ಬೆಳೆದಿದೆ ಆಗಸ ಚುಂಬಿಸುವಂದದಿ || ೨೬೧ ||

ವಿಭೀಷಣನೆಂದ ಲಕ್ಷ್ಮಣ ನೋಡೈ
ಇಲ್ಲಿಯೆ ರಾವಣಿ ಬಲಿಯನು ಅರ್ಪಿಸಿ
ಭೂತಗಣಗಳನು ತೃಪ್ತಿಯ ಪಡಿಸುತ
ಕಾಳಗ ಮಾಡುವ ರಾವಣಿ ಬಳಿಕ || ೨೬೨ ||

ರಾವಣಿ ಇನ್ನೂ ಹೋಮವ ಮಾಡದೆ
ಯುದ್ಧಕೆ ಬಂದಿಹ ಇದುವೇ ಸಮಯವು
ಆಲದ ಮರದಡಿ ಸೇರುವ ಮೊದಲೇ
ಅವನನು ಕೊಲ್ಲುವದೊಂದೇ ಮಾರ್ಗವು || ೨೬೩ ||

ನಿಕುಂಭಿಳೆ ವಸದಿ ಲಕ್ಷ್ಮಣ ಬಂದುದ
ತಿಳಿಯುತ ರಾವಣಿ ಬಂದನು ಅಲ್ಲಿಗೆ
ಕವಚಧಾರಿಯೂ ಧನುರ್ಧಾರಿಯೂ
ಎಂದೂ ಸೋಲನು ಅರಿಯದ ಕಲಿಯು || ೩೬೪ ||

ಲಕ್ಷ್ಮಣನೆಂದನು ರಕ್ಕಸ ಶ್ರೇಷ್ಠನೆ
ಕರೆಯುವೆ ನಿನ್ನನು ಯುದ್ಧಕೆ ಈಗಲೆ
ಯುದ್ಧವ ಮಾಡೆಲೊ ವಂಚನೆಯಿಲ್ಲದೆ
ರಾವಣಿ ಎಂದನು ವಿಭೀಷಣಗಾಗ || ೩೬೫ ||

ಇಂದ್ರಜಿತುವಿನಿಂದ ವಿಭೀಷಣನ ಅವಹೇಳನ :

ತಂದೆಯ ತಮ್ಮನು ಅಲ್ಲವೆ ನೀನು
ಎನ್ನಲಿ ದ್ರೋಹವ ಮಾಡುವಿಯಲ್ಲವೆ
ಸ್ನೇಹವು ಇಲ್ಲಾ ಜಾತಿಯು ಇಲ್ಲಾ
ಅಣ್ಣನು ತಮ್ಮನು ವಿಚಾರವಿಲ್ಲಾ || ೩೬೬ ||

ನಿನ್ನಯ ಜನರನು ಬಿಡುತಲಿ ನೀನು
ವೈರಿಯ ದಾಸನು ಆಗಿಹ ಹೇಡಿಯೆ
ವೈರಿಯು ಸಗುಣನು ಇರಲೂ ಬಹುದು
ತನ್ನಯ ಜನರದು ನಿರ್ಗುಣರಿದ್ದರು || ೩೬೭ ||

ವೈರಿಯು ಮಾತ್ರವೆ ವೈರಿಯೆ ಇರುವನು
ಎಮ್ಮಯ ಜನರೇ ಎಂದಿಗು ಮೇಲು
ಸ್ವಕೀಯ ಜನರನು ತೊರೆಯುತ ಯಾವನು
ವೈರಿಯ ದಾಸನು ಆದರೆ ಆತನು || ೩೬೮ ||

ತನ್ನಯ ಜನತೆಯ ನಾಶದ ನಂತರ
ನಾಶವ ಹೊಂದುವ ತಿಳಿಯದೆ ಇದುವೇ
ಕರುಣೆಯು ಇಲ್ಲದೆ ಕ್ರೂರಸು ಇರುತಿಹೆ
ತಂದಿಹೆ ಇಲ್ಲಿಗೆ ಶತ್ರು ಲಕ್ಷ್ಮಣನ || ೨೭೯ ||

**ವಿಭೀಷಣನ ಉತ್ತರ :**

ವಿಭೀಷಣನೆಂದ ರಾವಣ ಕುವರನೆ
ರಕ್ಕಸಕುಲದಲಿ ಹುಟ್ಟಿಯು ಕೂಡಾ
ರಕ್ಕಸ ನಡತೆಯು ಇಲ್ಲವು ಎನ್ನಲಿ
ಶೀಲವು ನಡತೆಯು ಮುಖ್ಯವು ಜನರಿಗೆ || ೨೮೦ ||

ಕ್ರೌರ್ಯದ ಪಾಪದ ಕಾರ್ಯವ ಮಾಡುವ
ದುಷ್ಟನ ಕೂಡಲೆ ತೊರೆಯುವದೊಳಿತು
ವಿಷವಿಹ ಸರ್ಪವ ತೊರೆಯುವ ತೆರದಲಿ
ಪ್ರಾಣಿಯ ಹಿಂಸೆಯು ಪರಧನ ಸೆಳೆತವು || ೨೮೧ ||

ಬೇರೆಯ ಹೆಣ್ಣಿನ ಸ್ಪರ್ಶನ ಇವುಗಳು
ಕೇಡಿನ ನಡೆತವು ಎನ್ನುವ ನೀತಿಯು
ಗೊತ್ತಿದೆಯಲ್ಲವೆ ಕಾರಣವೆಂಬುದು
ಸರ್ವನಾಶಗಳ ಉಗಮವು ಎಂಬುದು || ೨೮೨ ||

ಋಷಿಗಳ ವಧೆಯೂ ದೇವತೆ ಕಲಹವು
ಸೊಕ್ಕಿನ ಇರವೂ ಕೋಪವು ದ್ವೇಷವು
ಹಿತೈಷಿ ಸಂಗಡ ವಿರೋಧ ಇವುಗಳು
ಐಸಿರಿ ಜೀವನ ಹಾನಿಗೆ ಮೂಲವು || ೨೮೩ ||

ಇವುಗಳಿಗೆಲ್ಲಕೆ ಅಣ್ಣನು ಆಗರ
ಗುಣಗಳ ತುಳಿಯುತ ದೋಷಗಳುಕ್ಕಿವೆ
ತೊರೆಯುತ ಬಂದಿಹೆ ನಿಮ್ಮನು ಎಲ್ಲರ
ಯುದ್ಧವ ಮಾಡೆಲೊ ಲಕ್ಷ್ಮಣ ಜೊತೆಗೆ || ೨೭೪ ||

**ಇಂದ್ರಜಿತು-ಲಕ್ಷ್ಮಣರ ಯುದ್ಧ :**

ಕೇಳುತ ಈ ಸುಡಿ ಕೆರಳಿದ ರಾವಣಿ
ನಗ್ಗುತ ಬಂದನು ಲಕ್ಷ್ಮಣನೆಡೆಗೆ
ಭೀಕರ ಶರಗಳ ಬಿಡುತಲಿ ಬಂದನು
ಸೀಳಿತು ಕವಚವು ಬಾಣದ ಹೊಡೆತಕೆ || ೨೭೫ ||

ನೆತ್ತರ ಸುರಿಸುತ ನಿಂತನು ಲಕ್ಷ್ಮಣ
ಕೆರಳುತ ಬಿಟ್ಟನು ಬಾಣಗಳೈದನು
ಹೋಗುತ ನೆಟ್ಟಗೆ ಸರ್ಪದ ತೆರದಲಿ
ನೆಟ್ಟವು ರಾವಣಿ ಎದೆಯಲಿ ನೇರಕೆ || ೨೭೬ ||

ಕಿತ್ತುತ ಅವುಗಳ ರಾವಣಿ ಕರೆದನು
ಶರಗಳ ಮಳೆಯನು ತುಂಬಿತು ನಭವು
ಇಬ್ಬರು ವೀರರು ವಧಿಸಲು ಹೆಣಗುತ
ಕಾದಿದರೆಂತೆನೆ ಅಚ್ಚರಿ ನಿಜಕೂ || ೨೭೭ ||

ಯುದ್ಧದ ತೀಕ್ಷ್ಣತೆ ಬೆಳೆಯುತ ನಡೆಯಿತು
ಲಕ್ಷ್ಮಣ ಶರಗಳ ವೇಗವು ಹೆಚ್ಚಿತು
ಅಲ್ಲದೆ ಭೀಕರ ಅಸ್ತ್ರಗಳಾದವು
ರಾವಣಿ ನೋಡುತ ಖಿನ್ನನು ಆದನು || ೨೭೮ ||

ಕೂಡಲೆ ಅಂದನು ವಿಭೀಷಣನಾಗ
ಈಗಲೆ ನೋಡೈ ಇಂದ್ರಜಿತುವನು
ಬಾಣದ ಹೊಡೆತಕೆ ಕುಗ್ಗಿಹ ಆತನು
ಕಾಣುತಲಿರುವಡು ಸಮಯವು ಬಂದಿದೆ ॥ ೨೭೯ ॥

ಆವನನು ಕೊಲ್ಲಲು ಇದುವೇ ಸಮಯವು
ಉಗ್ರದ ನಿಶಿತದ ಅಸ್ತ್ರವ ಬಿಡುತಲಿ
ಕೊಲ್ಲುವ ಯತ್ನವ ಮಾಡೈ ಈಗಲೆ
ಕೂಡಲೆ ಬಿಟ್ಟನು ಲಕ್ಷ್ಮಣ ಶರಗಳ ॥ ೨೮೦ ॥

ಅಗ್ನಿಯು ಜ್ವಾಲೆಯು ತೆರದಲಿ ಹೋಗುವ
ಘೋರದ ಸರ್ಪದ ತೆರದಲಿ ತರಿಯುವ
ಉಗ್ರ ನಿಶಿತವಹ ಶರಗಳ ಬಿಡುತಲಿ
ಹೊಡೆದನು ರಾವಣಿ ಮೈಯಲಿ ಎಲ್ಲೆಡೆ ॥ ೨೮೧ ॥

ನಡೆಯಿತು ಕದನವು ಅತಿಶಯ ಭೀಕರ
ಯಾರೂ ಮಣಿಯರು ಸರಿಯರು ಹಿಂದಕೆ
ಆಗಿದೆ ದಣಿವೂ ಅತಿಶಯ ನಿಜಕೂ
ವಿಭೀಷಣನೆಂದ ಸದ್ಯಕೆ ನಾನೇ ॥ ೨೮೨ ॥

ಮುಂದಕೆ ಹೋಗುತ ಯುದ್ಧವ ಮಾಡುತ
ಕೊಡುವೆನು ವಿಶ್ರಮ ಲಕ್ಷ್ಮಣಗೀಗಲೆ
ಎನ್ನುತ ಬಂದನು ಬಿಲ್ಲನು ಹಿಡಿದು
ಶರಗಳ ಚಿಮ್ಮಿದ ರಕ್ಕಸ ಪಡೆಯಲಿ ॥ ೨೮೩ ॥

ವಾನರ ವೀರರೆ ಕೇಳಿರಿ ಎಲ್ಲರು
ರಾವಣ ಬಿಟ್ಟರೆ ರಾವಣ ದೊರೆಗೆ
ಆಶ್ರಯವಿಲ್ಲವು ಸತ್ತರು ಎಲ್ಲರು
ಕೊಂದರೆ ಇವನನು ಗೆಲುವರು ನಿಶ್ಚಿತ || ೨೮೪ ||

ಎನ್ನಯ ಅಣ್ಣನ ಮಗನೇ ಈತನು
ಎನಗೂ ಮಗನೇ ಅಲ್ಲವೆ ನಿಜಕೂ
ಇವನನು ನಾನೇ ಕೊಲ್ಲುವದಲ್ಲವು
ತಂದೆಯು ಮಗನನು ಕೊಲ್ಲುವರುಂಟೇ || ೨೮೫ ||

ರಕ್ಕಸ ಪಡೆಯನು ತರಿಯಿರಿ ನೀವು
ಲಕ್ಷ್ಮಣ ಕೊಲ್ಲಲಿ ಇಂದ್ರಜಿತುವನು
ಕೇಳಿದರೀ ನುಡಿ ವಾನರ ವೀರರು
ಕಾಳಗವಾಯಿತು ಭೀಕರವಿನ್ನೂ || ೨೮೬ ||

ಬಾಣವ ಬಿಡುತಿಹ ಹೆದೆಯನು ಎಳೆಯುವ
ಬಾಣವ ಹಿರಿಯುವ, ಲಕ್ಷ್ಮಣ ನೋಡುವ
ಯಾವದು ಕಾಣದು ತೀವ್ರತೆಯೊಳಗೆ
ಮುಚ್ಚಿದವೆಲ್ಲೆಡೆ ಸರಳಗಳೆಲ್ಲವು || ೨೮೭ ||

ಸೂರ್ಯನು ಕಾಣದ ತೆರದಲಿ ನಭದಲಿ
ತುಂಬಿದವೆಲ್ಲೆಡೆ ಶರಗಳು ಸುತ್ತಲು
ಕತ್ತಲೆ ತುಂಬಿತು ದಾರುಣ ಸ್ವರವೂ
ಲಕ್ಷ್ಮಣ ತರಿದನು ಸಾರಥಿ ಶಿರವನು || ೨೮೮ ||

ರಾವಣಿ ತಾನೇ ನಡೆಸುತ ರಥವನು
ಮೆರೆದನು ಬಿಲ್ಲನು ಹಿಡಿಯುತ ಇನಾ
ಮೆಚ್ಚಿದರೆಲ್ಲರು ರಾವಣಿ ಶಕ್ತಿಯ
ಯುದ್ಧವ ಮಾಡುವ ರಥವನು ನಡೆಸುತ || ೨೮೯ ||

ಲಕ್ಷ್ಮಣ ಬಿಡುತಿಹ ಬಾಣಗಳೆಲ್ಲವ
ಮುರಿಯುವದೊಂದೇ ಆಯಿತು ಕೆಲಸವು
ತನ್ನಯ ಶರಗಳ ಚಿಮ್ಮಲು ಅವನಿಗೆ
ಸಮಯವು ಸಿಗದೇ ಅಳುಕಿದ ಮನದಲಿ || ೨೯೦ ||

ಕಂದಿತು ರಾವಣಿ ಮುಖವದು ಆಗಲೆ
ಕಪಿವರ ವೀರರು ಜಿಗಿಯುತ ಮೇಲಕೆ
ಕುಳಿತರು ರಾವಣಿ ಕುದುರೆಯ ಮೇಲೆಯೆ
ನೆತ್ತರ ಕಕ್ಕುತ ಬಿದ್ದವು ಹಯಗಳು || ೨೯೧ ||

ಪುಡಿಪುಡಿಯಾಗಿಹ ರಥವನು ತೊರೆಯುತ
ರಾವಣಿ ನಿಂತನು ನೆಲದಲಿ ಆಗಲೆ
ಹಾಗೆಯೆ ಕಾಳಗ ಮಾಡುತಲಿದ್ದನು
ಒಮ್ಮೆಲೆ ಕೂಗುತ ಹೇಳಿದ ಭಟರಿಗೆ || ೨೯೨ ||

ಇಂದ್ರಜಿತುವು ಹೊಸ ರಥವನ್ನು ತರುವದು :

ರಕ್ಕಸ ಭಟರೇ ಕತ್ತಲೆ ಮುತ್ತಿದೆ
ಲಂಕೆಗೆ ಹೋಗುತ ರಥವನು ತರುವೆನು
ಹೀಗೆಯೆ ಯುದ್ಧವ ಮಾಡುತ ನಿಲ್ಲಿರಿ
ಎನ್ನಯ ಹೋದುದು ತಿಳಿಯದು ವೈರಿಗೆ || ೨೯೩ ||

ಬಂದಿತು ಸುಂದರ ಸುವರ್ಣ ರಥವು
ಜಾತಿಯ ಹಯಗಳು ನುರಿತಿಹ ಸಾರಥಿ
ರಾವಣಿ ನಿಂತಿಹ ನಿರ್ಭಯ ಶೂರನು
ಲಕ್ಷ್ಮಣ ನೋಡುತ ವಿಸ್ಮಿತನಾದನು || ೨೯೪ ||

ಮಂಡಲ ತೆರದಲಿ ತಿರುಗುತ ರಾವಣಿ
ಶರಗಳ ಜಾಲವ ಹಬ್ಬಿಸಿ ಎಲ್ಲೆಡೆ
ಒಟ್ಟಿದ ಕಪಿಗಳ ಹೆಣಗಳ ರಾಶಿಯ
ಸಿಟ್ಟಲಿ ಲಕ್ಷ್ಮಣ ಮುರಿದನು ಧನುವನು || ೨೯೫ ||

ರಾವಣಿ ತರಿಸುತ ಬೇರೆಯ ಚಾಪವ
ಬಿಟ್ಟನು ಸರಳನು ಲಕ್ಷ್ಮಣನೆಡೆಗೆ
ಲಕ್ಷ್ಮಣ ತರಿದನು ಸಾರಥಿ ತಲೆಯನು
ಆದರು ರಥವದು ಚಲಿಸಿತು ಸರಿಯೇ || ೨೯೬ ||

ಸಿಟ್ಟಲಿ ಲಕ್ಷ್ಮಣ ಕೊಂದನು ಹಯಗಳ
ಒಬ್ಬರನೊಬ್ಬರು ಘಾತಿಸುತಿದ್ದರು
ರಾವಣಿ ಹಿರಿದನು ಯಮದೇವತಾಕ
ಘೋರ ಮಂತ್ರವನು ಜಪಿಸುತಲಿದ್ದನು || ೨೯೭ ||

ಲಕ್ಷ್ಮಣ ನೋಡಿದ ಈ ಪರಿ ಅಸ್ತ್ರವ
ಕುಬೇರ ಕೊಟ್ಟಿಹ ದಾರುಣ ಶರವನು
ಹೂಡುತ ಬಿಲ್ಲಿಗೆ ಬಿಟ್ಟನು ವೈರಿಗೆ
ಜ್ವಲಿಸುತ ಎರಡೂ ಡಿಕ್ಕಿಯ ಹೊಡೆದವು || ೨೯೮ ||

ಬೆಂಕಿಯ ಉಂಡೆಗಳಾಗುತ ಬಿದ್ದವು
ಸಿಟ್ಟಲಿ ಲಕ್ಷ್ಮಣ ಬಿಟ್ಟನು ಕೂಡಲೆ
ವಾರುಣಾಸ್ತ್ರವನು ಹಾಗೆಯೆ ರಾವಣಿ
ಕಡಿದನು ಅದನೂ ರೌದ್ರಾಸ್ತ್ರದಿಂದ || ೨೯೯ ||

ರಕ್ಕಸನಿಂದಲಿ ಆಗ್ನೇಯಾಸ್ತ್ರವು
ಲಕ್ಷ್ಮಣ ತಡೆದನು ಸೌರಾಸ್ತ್ರದಿಂದ
ರಾವಣಿ ನಿಶ್ಚಯ ಮಾಡಿದ ಮನದಲಿ
ಕೊಲ್ಲಲು ಕೂಡಲೆ ಲಕ್ಷ್ಮಣನನ್ನು || ೩೦೦ ||

ತೆಗೆದನು ಭೀಕರ ಅಸ್ತ್ರವನೊಂದನು
ಅಸುರವೆನ್ನುವ ಅಸ್ತ್ರವು ಅದುವೇ
ಹೂಡಿದ ಕೂಡಲೆ ಚಿಮ್ಮುತ ಬಂದವು
ಕೂಡ ಮುದ್ಗರವು ಶೂಲ ಗದೆ ಪರಶು || ೩೦೧ ||

ಖಡ್ಗ ಭುಸುಂಡಿಯು ಭೀಷಣ ಆಯುಧ
ಸರ್ವಶತ್ರುವೂ ವಿಧ್ವಂಸಕವೂ
ಆಗಿಹ ಅಸ್ತ್ರವ ನೋಡುತ ಲಕ್ಷ್ಮಣ
ಬಿಟ್ಟನು ಕೂಡಲೆ ಮಹೇಶ್ವರಾಸ್ತ್ರವ || ೩೦೨ ||

ಅಸುರ ಆಯಿತು ನಾಶವು ಅಲ್ಲಿಯೆ
ಲಕ್ಷ್ಮಣ ಹಿರಿದನು ಐಂದ್ರಾಸ್ತ್ರವನು
ಅಪಜಯವೆಂಬುದು ಇಲ್ಲವು ಅದಕೆ
ಮಂತ್ರವ ಜಪಿಸುತ ಬಿಟ್ಟನು ಅದನು || ೩೦೩ ||

ಇಂದ್ರಜಿತುವಿನ ಮರಣ :

ಜೊತೆಗೇ ಮಂತ್ರವ ಅನ್ನುತ ಹೇಳಿದ
ದಶರಥ ಕುವರನು ಅಣ್ಣನು ರಾಮನು
ಧರ್ಮ ಮೂರ್ತಿಯೂ ಸತ್ಯಸಂಧನೂ
ಅಸಮ ಪರಾಕ್ರಮಿ ಇರುವದು ದಿಟವಿರೆ || ೩೦೪ ||

ರಾವಣ ತನಯನ ಅಸುವನು ಹೀರು
ಎನ್ನುತ ಬಿಡಲು ಬಾಣವು ನೆಟ್ಟಗೆ
ಕರ್ಣಕುಂಡಲದ ಸಹಿತವೆ ಶಿರವನು
ತರಿಯುತ ತೂರಿತು ಗಗನದಿ ಮೇಲಕೆ || ೩೦೫ ||

ರಾವಣಿ ಮರಣವ ಕಾಣುತ ಸೇನೆಯು
ಓಡಿತು ಕೂಡಲೆ ಲಂಕೆಯು ಕಡೆಗೆ
ಬಿದ್ದರು ಕೆಲವರು ಸಾಗರದೊಳಗೆ
ಏರುತ ಗಿರಿಗಳ ಅವಿತರು ಕೆಲವರು || ೩೦೬ ||

ವಾನರ ಸೇನೆಯು ಆರ್ಭಟಿ ಸಿೀರೆದು
ಕುಣಿದರು ಗರ್ಜನೆ ಮಾಡುತ ನೆಗೆದರು
ಅಪ್ಪುತ ಒಬ್ಬರನೊಬ್ಬರು ಎಲ್ಲರು
ಸಂತಸ ಸೂಸುತ ನಲಿದರು ವೀರರು || ೩೦೭ ||

ನೇತ್ರರ ಸುರಿಯುತಲಿದ್ದರು ಲಕ್ಷ್ಮಣ
ವಿಜಯದ ಸಂತಸ ತುಂಬಿತು ಮನದಲಿ
ಹನುಮನ ಜಾಂಬವ ವಾನರ ಮುಖ್ಯರ
ಸಹಿತವೆ ಬಂದನು ರಾಮನ ಕಡೆಗೆ || ೩೦೮ ||

ಅಣ್ಣನ ಪಾದಕೆ ನಮಿಸುತ ಲಕ್ಷ್ಮಣ
ನಿಂತನು ಬದಿಯಲಿ ಬಿಲ್ಲನು ಹಿಡಿದು
ವಿಭೀಷಣ ಮಾತ್ರ ಸಂತಸದಿಂದಲಿ
ಉಸುರಿದ ರಾವಣಿ ಮರಣದ ವಿಷಯವ || ೩೦೯ ||

ಶ್ರೀರಾಮನಿಂದ ಲಕ್ಷ್ಮಣನ ಪ್ರಶಂಸೆ :

ಭಲೆಭಲೆ ತಮ್ಮನೆ ಅದ್ಭುತ ಮಾಡಿದೆ
ರಾವಣಿ ಮರಣವೆ ವಿಜಯದ ಮಾರ್ಗವು
ಎನ್ನುತ ಮೂಸಿದ ತಮ್ಮನ ತಲೆಯನು
ಹಾಗೆಯೆ ಅಪ್ಪಿದ ಸಂತಸದಿಂದಲಿ || ೩೧೦ ||

ರಾಮನು ನೋಡಿದ ಲಕ್ಷ್ಮಣ ದೇಹವ
ನೆತ್ತರು ಹರಿದಿದೆ ಗಾಯಗಳಿಂದಲಿ
ಹಗಲೂ ರಾತ್ರಿಯು ಮೂರು ದಿನಗಳಲಿ
ಯುದ್ಧವ ಮಾಡುತ ವಧಿಸಿದೆ ಅವನನು || ೩೧೧ ||

ಉಳಿದಿಹನೊಬ್ಬನೆ ರಾವಣನೀಗಲೆ
ಸಿಟ್ಟಲೆ ಬರುವನು ಸೈನ್ಯದ ಸಹಿತದಿ
ಕೊಲ್ಲುವೆ ಅವನನು ಚಿಂತೆಯು ಬೇಡಾ
ಕರೆದನು ಆಗಲೆ ಸುಷೇಣನನ್ನು || ೩೧೨ ||

ಲಕ್ಷ್ಮಣ ಅಲ್ಲದೆ ವಿಭೀಷಣ ಕೂಡ
ಕಪಿವರ ವೀರರು ಹೊಂದಿಹ ಗಾಯ್ಗಳ
ನಿನ್ನಯ ಸಿದ್ಧಿಯ ಔಷಧ ಕೊಡುತಲಿ
ಕೂಡಲೆ ಮಾಯಿಸು ತಡವನು ಮಾಡದೆ || ೩೧೩ ||

ರಾವಣನಿಗೆ ಇಂದ್ರಜಿತುವಿನ ಮರಣದ ಸುದ್ದಿ :

ಸುಷೇಣನಾಗಲೆ ಮೂಲಿಕೆ ಹಿಂಡುತ
ಕಳೆದನು ಎಲ್ಲರ ಗಾಯ್ಗಳ ಕೂಡಲೆ
ಲಕ್ಷ್ಮಣನಾದನು ಮೊದಲಿನ ತೆರದಲಿ
ನೋಡುತ ಅವನನು ನಲಿದರು ಎಲ್ಲರು || ೩೧೪ ||

ಓಡುತ ಆಗಲೆ ರಾವಣ ಭಟರು
ರಾವಣ ರಾಜಗೆ ತಿಳಿಸಿದರೆಂತೆನೆ
ರಾಜನೆ ನಿಮ್ಮಯ ಕುವರ ಶ್ರೇಷ್ಠನು
ಮಡಿದನು ರಣದಲಿ ಲಕ್ಷ್ಮಣ ಬಾಣದಿ || ೩೧೫ ||

ನಿನ್ನಯ ತಮ್ಮನು ವಿಭೀಷಣನಾಗ
ಗುಟ್ಟನು ರಟ್ಟನು ಮಾಡಿದನಾಗಲೆ
ಅಂತೆಯೆ ಲಕ್ಷ್ಮಣ ಕೆಡಿಸಿದ ಹೋಮವ
ಯುದ್ಧದಿ ಕುವರನು ಮಡಿದನು ಹೋರುತ || ೩೧೬ ||

ರಾವಣನ ಶೋಕ ಹಾಗೂ ಕ್ರೋಧ :

ಕೂಡಲೆ ದುಃಖವು ಮುತ್ತಿತು ರಾಜಗೆ
ಮೂರ್ಛೆಯು ಹೊಂದುತ ಬಿದ್ದನು ಅಲ್ಲಿಯೆ
ಹಾಗೆಯೆ ಏಳುತ ಅಂದನು ರಾವಣ
ಇಂದ್ರನ ಗೆದ್ದಿಹ ವೀರನೆ ಕುವರನೆ || ೩೧೭ ||

ಲಕ್ಷ್ಮಣ ಬಾಣಕೆ ಬಲಿಯಾದೆ ಹೇಗೆ
ಮರಣವ ಯಮನನು ಜಯಿಸುವ ವೀರನು
ಸತ್ತಿಹೆ ಎಂಬುದು ನಂಬುವದೆಂತು
ವೀರನ ಗತಿಯನು ಹೊಂದಿದೆ ನಿಜಕೂ || ೩೧೮ ||

ದೇವತೆ ಎಲ್ಲರು ದಿಕ್ಪಾಲಕರೂ
ಆದರು ಇಂದಿಗೆ ಅಂಜಿಕೆ ಇಲ್ಲದೆ
ಕೂಡಲೆ ದುಃಖವು ಇಳಿಯಿತು ಮನದಲಿ
ಕ್ರೋಧವು ಉಕ್ಕಿತು ಭೀಕರ ರೂಪದಿ || ೩೧೯ ||

ಹುಬ್ಬುಗಳೆರಡೂ ಏರುತ ಮೇಲಕೆ
ಕಣ್ಣುಗಳೆರಡೂ ಕಿಡಿಯನು ಕಾರುತ
ಚಿಂತಿಸಿ ಅಂದನು ಸೀತೆಯು ಕಾರಣ
ಕುವರನು ಹೊಂದಿದ ಮರಣದ ಗತಿಯು || ೩೨೦ ||

ಮಾಯಾ ಸೀತೆಯ ಕೊಲ್ಲುವ ಆಟವ
ಮಾಡುತ ಕುವರನು ಯುದ್ಧದಿ ತೋರಿದ
ಮಾಡುವೆ ಅದನೇ ದಿಟವನು ಇಂದಿಗೆ
ಕೊಲ್ಲುವೆ ನಿಜಕೂ ಸೀತೆಯ ನಾನು || ೩೨೧ ||

ಎನ್ನುತ ಹಿರಿದನು ಕತ್ತಿಯ ಹೊರಗೆ
ನಡೆದನು ರಭಸದಿ ಅಶೋಕ ವನಕೆ
ಹಿತಕರ ಆಪ್ತರು ತಡೆದರು ಕೇಳದೆ
ನುಗ್ಗುತ ಬಂದನು ರಭಸದಿ ಅಲ್ಲಿಗೆ || ೩೨೨ ||

ರಾವಣನಿಗೆ ಸಚಿವನ ಸಲಹೆ

ರಾವಣ ಸಚಿವನು ಸುಪಾರ್ಶ್ವನಾಗಲೆ
ಬಂದನು ಕೂಡಲೆ ರಾವಣನೆದುರಿಗೆ
ಮಹಾರಾಜವರ ದಶಗ್ರೀವನೇ
ಸೈರಿಸು ದುಃಖವ ಕೋಪವ ಎಲ್ಲವ || ೩೨೩ ||

ವೇದವ ಕಲಿತೂ ವ್ರತವನು ಮಾಡಿಯು
ಸ್ವಧರ್ಮ ನಿರತನು ರಾಕ್ಷಸ ವೀರನು
ಇಂದ್ರ ವರುಣ ಯಮ ಕುಬೇರರನ್ನು
ಸೋಲಿಸಲಿಲ್ಲವೆ ದಿಕ್ಪಾಲಕರನು ॥ ೩೬೪ ॥

ಇಂತಹ ವೀರನು ಹೆಣ್ಣನು ಕೊಲ್ಲುತ
ಪತಿತನು ಆಗುವ ಹೇಡಿಯೆ ನೀನು
ನಿನ್ನಯ ಕ್ರೋಧವು ಉಕ್ಕಲಿ ಇನ್ನೂ
ರಾಮನ ಮೇಲೆಯೆ ಶಕ್ತಿಯ ತೋರಿಸು ॥ ೩೬೫ ॥

ನಾವೂ ಇರುವೆವು ಜೊತೆಯಲಿ ಯುದ್ಧದಿ
ಇಂದೆಯೆ ಇರುವದು ಕೃಷ್ಣ ಚತುರ್ದಶಿ
ಯುದ್ಧದ ಸಿದ್ಧತೆ ಎಲ್ಲವು ಆಗಲಿ
ನಾಳೆಯ ದಿನವೇ ಯುದ್ಧಕೆ ಹೊರಡಿರಿ ॥ ೩೬೬ ॥

ರಾಮನ ಮರಣವು ಆಯಿತು ಎಂದರೆ
ಸೀತೆಯು ನಿಮಗೇ ಅಲ್ಲವೆ ಏನು
ರಾವಣ ಒಪ್ಪಿದ ಸಚಿವನ ಮಾತನು
ರಕ್ಕಸ ಭಟರೇ ಕೇಳಿರಿ ಎಲ್ಲರು ॥ ೩೬೭ ॥

ಈರೈದು ಸಾಸಿರ ವರ್ಷದಿ ನಾನು
ಭೀಕರ ತಪವನು ಮಾಡುತ ಪಡೆದಿಹೆ
ಬ್ರಹ್ಮನ ವರವನು ಅಂಜಿಕೆ ಇಲ್ಲವು
ಬ್ರಹ್ಮನು ಕೊಟ್ಟಿಹ ಕವಚವು ಇರುವದು ॥ ೩೬೮ ॥

ಇಂದ್ರನ ವಜ್ರಕು ಮಣಿಯದ ಕವಚವು
ಬ್ರಹ್ಮನು ಕರುಣಿಸಿ ಕೊಟ್ಟಿಹ ಬಿಲ್ಲನು
ಅಲ್ಲದೆ ಕೊಟ್ಟಿಹ ಶರಗಳ ಸಹಿತದಿ
ತನ್ನಿರಿ ಬಿಲ್ಲನು ಈಗಲೆ ಇಲ್ಲಿಗೆ ॥ ೩೨೯ ॥

**ರಾಕ್ಷಸರಿಗೆ ರಾವಣನ ನಿವೇದನೆ :**

ರಾವಣ ಕರೆದನು ರಕ್ಕಸ ಸಭೆಯನು
ನೋಡುತ ರಕ್ಕಸ ವೀರರನೆಲ್ಲರ
ಕೈಗಳ ಮುಗಿಯುತ ಅಂದನು ಅವರಿಗೆ
ಮಿತ್ರರೆ ಎಲ್ಲರು ಹೊರಡಿರಿ ಯುದ್ಧಕೆ ॥ ೩೩೦ ॥

ರಾಮನ ಸುತ್ತಲು ಮುತ್ತುತ ನೀವು
ಕೊಲ್ಲಲು ಯತ್ನವ ಮಾಡಿರಿ ಎಲ್ಲರು
ರಾಮನ ಕೊಲ್ಲಲು ಆಗದೆ ಇದ್ದರು
ಗಾಯವ ಮಾಡುತ ನೆತ್ತರ ಸುರಿಸಿರಿ ॥ ೩೩೧ ॥

ನಾಳೆಯ ದಿನವೇ ಹೋಗುತ ನಾನು
ತರಿಯುವೆ ರಾಮನ ಶಿರವನು ನೋಡಿರಿ
ಹೊರಟರು ರಕ್ಕಸ ಮುಖ್ಯರು ಯುದ್ಧಕೆ
ಕಾಳಗ ನಡೆಯಿತು ಭೀಕರ ರೂಪದಿ ॥ ೩೩೨ ॥

ರಕ್ಕಸರಬ್ಬರ ಹೆಚ್ಚುತ ಹೋಗಲು
ಕಪಿಗಳು ಸರಿದರು ಓಡುತ ಹಿಂದಕೆ
ರಾಮನು ಬಂದರೆ ಬದುಕಲು ಸಾಧ್ಯವು
ಎನ್ನುತ ಸರಿದರು ರಾಮನ ಕಡೆಗೆ ॥ ೩೩೩ ॥

ರಾಮನು ನೋಡುತ ರಕ್ಕಸರಬ್ಬರ
ಬಿಟ್ಟನು ಕಣೆಗಳ ಕುಣಿಯುತ ಎಲ್ಲೆಡೆ
ಪುಟಿದವು ರಕ್ಕಸ ಶಿರಗಳು ಮೇಲಕೆ
ಸೀಳಿದವೆಷ್ಟೋ ಎದೆಗಳು ಆಗಲೆ || ೩೩೪ ||

ನೆತ್ತರ ಕೋಡಿಯು ಹರಿಯಿತು ರಣದಲಿ
ಕೈಗಳು ಕಾಲ್ಗಳು ಹಾರುತಲಿದ್ದವು
ದೇಹಗಳೆಷ್ಟೋ ತೇಲುತಲಿದ್ದವು
ಚೀರುವ ನರಳುವ ಸಪ್ಪಳ ತುಂಬಿತು || ೩೩೫ ||

ಭೀಕರ ದೃಶ್ಯವ ನೋಡುತ ಕಪಿಗಳು
ಬೆಕ್ಕಸ ಬೆರಗುತ ನಿಂತರು ನೋಡುತ
ಆಕ್ಕಸದಿಂದಲಿ ಬರುತಿಹ ರಕ್ಕಸ
ಮಕ್ಕಳು ಎಲ್ಲರು ಬಿದ್ದರು ರಣದಲಿ || ೩೩೬ ||

ರಾಮನು ಬಿಟ್ಟಿಹ ಗಂಧರ್ವಾಸ್ತ್ರವು
ಹುರಿಯಿತು ಮುಕ್ಕಿತು ರಕ್ಕರ ಕುಲವನು
ಉಳಿದಿಹ ಕೆಲವೇ ರಕ್ಕಸ ಭಟರೂ
ಓಡಿದರಾಗಲೆ ಲಂಕೆಯ ಕಡೆಗೆ || ೩೩೭ ||

ಲಂಕಾನಗರದ ಸ್ಥಿತಿ :

ಲಂಕೆಯ ತುಂಬಾ ರೋದನ ಧ್ವನಿಯು
ಕೇಳಿತು ಎಲ್ಲೆಡೆ ಮಕ್ಕಳ ಕ್ರಂದನ
ಬೈಯುವರೆಲ್ಲರು ರಾವಣ ಭಗಿನಿಯ
ರಕ್ಕಸ ನಾಶಕೆ ಮೂಲವು ಎನ್ನುತ || ೩೩೮ ||

ರಾವಣ ಕೇಳಿದ ರೋದನ ಧ್ವನಿಯನು
ತುಂಬಿದೆ ಎಲ್ಲೆಡೆ ಲಂಕಾನಗರದಿ
ಚಿಂತಿತನಾದನು ರಾವಣ ಕೊಂಚ
ನಂತರ ಮುತ್ತಿತು ಕ್ರೋಧದ ಜ್ವಾಲೆಯು ॥ ೩೩೯ ॥

ಕರೆದನು ಸೈನಿಕ ಮುಖ್ಯರ ಎಲ್ಲರ
ಸಚಿವರ ಕರೆದನು ಹೇಳಿದ ಅವರಿಗೆ
ಹೊರಡುವೆ ಯುದ್ಧಕೆ ಸಿದ್ಧರು ಆಗಿರಿ
ರಕ್ಕಸರೆಲ್ಲರು ಹೊರಡಿರಿ ಯುದ್ಧಕೆ ॥ ೩೪೦ ॥

ತಿಳಿಸಿರಿ ಅಪ್ಪಣೆ ಮನೆಮನೆಯಲ್ಲೂ
ಹೋಯಿತು ಆಣತಿ ಎಲ್ಲರ ಮನೆಗೂ
ಬಂದರು ರಕ್ಕಸ ವೀರರು ಎಲ್ಲರು
ಉಜ್ವಲ ರಥವೂ ಬಂದಿತು ಎದುರಿಗೆ ॥ ೩೪೧ ॥

ಕ್ರೋಧದಿ ಉರಿಯುತ ಹೊರಟನು ರಾವಣ
ಕೋಟೆಯ ಹೊರಗಡೆ ಬಂದನು ಕೂಡಲೆ
ಜೊತೆಗೇ ಇದ್ದರು ಸಚಿವರು ಮೂವರು
ಮಹಾಪಾರ್ಶ್ವನು ಮಹೋದರನು ಸಹ ॥ ೩೪೨ ॥

ಅಲ್ಲದೆ ಇದ್ದನು ವಿರೂಪಾಕ್ಷನೂ
ರಕ್ಕಸ ಸೇನೆಯು ಮುತ್ತಿತು ಕಪಿಗಳ
ನಡೆಯಿತು ಯುದ್ಧವು ಭೀಕರ ರೂಪದಿ
ರಕ್ಕಸ ರಭಸಕೆ ಸರಿದರು ಕಪಿಗಳು ॥ ೩೪೩ ॥

**ಸುಗ್ರೀವನ ಭೀಕರ ಕಾಳಗ :**

ರಣವದು ತುಂಬಿತು ಕಪಿಗಳ ಶವದಿಂ
ಎತ್ತಲು ಕಾಣುವ ವಾನರ ಓಟವು
ಕಾಣುತ ಈ ಪರಿ ಸುಗ್ರೀವನಾಗ
ಭೀಕರ ಯುದ್ಧಪ ನಿಶ್ಚಯ ಮಾಡಿದ ॥ ೩೪೪ ॥

ಘೋರ ಗರ್ಜನೆಯ ಮಾಡುತ ಬಂದನು
ಶಿಲ ಶೈಲಗಿರಿಯ ಮರಗಳ ರಥಗಳ
ಎತ್ತುತ ತೂರುತ ಕುಟ್ಟಿದ ವೈರಿಯ
ನುಗ್ಗುತ ಬಂದನು ವಿರೂಪಾಕ್ಷನೆಡೆ ॥ ೩೪೫ ॥

ರಕ್ಕಸ ಕುಳಿತಿಹ ಆನೆಯ ಮುಖಕೆ
ಮರವನು ಬೀಸುತ ಕೊಟ್ಟನು ಏಟನು
ಘೀಳಿಪ ಗಜವದು ಉರುಳಿತು ಭೂಮಿಗೆ
ರಕ್ಕಸ ಬಂದನು ಕತ್ತಿಯ ಹಿರಿಯುತ ॥ ೩೪೬ ॥

ವಾನರ ವೀರನು ತೂರಿದ ಬಂಡೆಯ
ಹೊಡೆತಕೆ ಸಿಗದಲೆ ನೆಗೆಯುತ ಮೇಲಕೆ
ರಕ್ಕಸ ವೀರನು ಮುಷ್ಟಿಯ ಬಿಗಿಯುತ
ಗುದ್ದಿದ ವಾನರ ರಾಜನ ಎದೆಗೆ ॥ ೩೪೭ ॥

ಏಟಿಗೆ ಬಂದಿತು ಬವಳಿಯು ಕುಸಿದನು
ಕೂಡಲೆ ಎಚ್ಚರ ಹೊಂದುತ ಆತನು
ಕೊಟ್ಟನು ಏಟನು ರಕ್ಕಸನೆದೆಗೆ
ಸಿಟ್ಟಲೆ ರಕ್ಕಸ ಬೀಸಿದ ಖಡ್ಗವ ॥ ೩೪೮ ॥

ಹೊಡೆತದ ರಭಸಕೆ ಕವಚವು ಮುರಿಯಿತು
ಸುಗ್ರೀವನಾಗ ಸಿಟ್ಟನು ತಡೆಯದೆ
ವಜ್ರಮುಷ್ಟಿಯಲಿ ನೆತ್ತಿಗೆ ಹೊಡೆದನು
ನೆತ್ತರ ಕಕ್ಕುತ ರಕ್ಕಸನುರುಳಿದ ‖ ೩೫೯ ‖

ವಿರೂಪಾಕ್ಷನದು ಮರಣದ ಸುದ್ದಿಯು
ಮುಟ್ಟಿತು ಕೂಡಲೆ ರಾವಣ ದೊರೆಗೆ
ಕೂಡಲೆ ಕರೆಯುತ ಮಹೋದರನನು
ಕಳಿಸಿದ ಕೊಲ್ಲಲು ಸುಗ್ರೀವನನ್ನು ‖ ೩೫೦ ‖

ಕಾಳಗ ನಡೆಯಿತು ಉಗ್ರ ರೀತಿಯಲಿ
ಮುಷ್ಟಿಯುದ್ಧದಲಿ ಪಳಗಿದ ಇಬ್ಬರು
ಹೊಡೆದರು ಕುಟ್ಟುತ ಒಬ್ಬರನೊಬ್ಬರು
ಕೊನೆಯಲಿ ಹೊಂದುತ ಕತ್ತಿ ಗುರಾಣಿಯ ‖ ೩೫೧ ‖

ಕಾದಿದರಿಬ್ಬರು ಪ್ರಚಂಡವಾಗಿ
ಸಮಯವ ಸಾಧಿಸಿ ಮಹೋದರನಾಗ
ಬೀಸಿದ ಖಡ್ಗವ ಸುಗ್ರೀವನೆದೆಗೆ
ಗುರಾಣಿಯನೊಡ್ಡುತ ಏಟನು ತಪ್ಪಿಸಿ ‖ ೩೫೨ ‖

ಸರಿದನು ವಾನರ ರಾಜನು ಬದಿಗೆ
ಸಿಕ್ಕಿತು ಖಡ್ಗವು ಗುರಾಣಿಯ ಒಳಗೆ
ರಕ್ಕಸ ಕತ್ತಿಯ ಕಿತ್ತುತಲಿರಲು
ಸುಗ್ರೀವ ಮಾತ್ರ ಬೀಸುತ ಕತ್ತಿಯ ‖ ೩೫೩ ‖

ಮಿಂಚಿನ ವೇಗದಿ ತರಿದನು ಶಿರವನು
ಉರುಳಿತು ರಕ್ಕಸ ದೇಹವು ಭೂಮಿಗೆ
ಬಿದ್ದಿತು ಉನ್ನತ ಪರ್ವತ ಪ್ರಾಯದಿ
ವಿಜಯದ ಗರ್ಜನೆ ತುಂಬಿತು ನಭವನು || ३೫४ ||

**ಅಂಗದನ ಕಾಳಗ :**

ದೂರದಿ ನೋಡಿದ ಮಹಾಪಾರ್ಶ್ವನು
ಸಿಟ್ಟಲಿ ಹೊಕ್ಕನು ಅಂಗದ ಸೇನೆಯ
ವಾನರ ಸೇನೆಯ ಕೊಲ್ಲುವ ರಭಸವ
ತಡೆಯಲು ಬಂದನು ಎದುರಿಗೆ ಅಂಗದ || ३೫೫ ||

ರಕ್ಕಸ ನುಗ್ಗಿದ ಬಿಡುತಲಿ ಶರಗಳ
ಮುರಿಯುತ ಅವುಗಳ ಪರಿಘದಿ ಅಂಗದ
ಬಿಟ್ಟನು ಏಟನು ರಕ್ಕಸನೆದೆಗೆ
ಮೂರ್ಛೆಯ ತಾಳುತ ಬಿದ್ದನು ರಕ್ಕಸ || ३೫೬ ||

ಕೂಡಲೆ ಏಳುತ ರಕ್ಕಸ ಬಂದನು
ಭೀಕರ ಕೊಡಲಿಯ ಕೈಯಲಿ ಹಿಡಿಯುತ
ಬೀಸಿದ ಕೊಡಲಿಯ ಅಂಗದ ಕಂಠಕೆ
ನೆಗೆದನು ಅಂಗದ ಏಟದು ತಪ್ಪಿತು || ३೫೭ ||

ಕೂಡಲೆ ಅಂಗದ ಮುಷ್ಟಿಯ ಬಿಗಿಯುತ
ವಜ್ರದ ರೂಪದಿ ಶಕ್ತಿಯ ಸೇರಿಸಿ
ಕೊಟ್ಟನು ವಜ್ರದ ಏಟನು ಎದೆಗೆ
ಸೀಳಿತು ಎದೆಯು ಉರುಳಿದ ರಕ್ಕಸ || ३೫೮ ||

ವಾನರ ಸೇನೆಯು ಬೊಬ್ಬಿರಿಯುತ್ತಲಿ
ಗರ್ಜನೆ ಮಾಡಿತು ರಣವದು ನಡುಗಿತು
ರಕ್ಕಸ ಸೇನೆಯು ಓಡುತಲಿದ್ದಿತು
ರಾವಣ ತಡೆದನು ತನ್ನಯ ಭಟರನು ॥ ೩೫೯ ॥

ಕೇಳುತ ಮೂವರು ಸಚಿವರ ಮರಣವ
ರಾವಣನಾದನು ಕೆರಳಿದ ಕೇಸರಿ
ತರಿಯುವೆ ರಾಮನ ಕಪಿಬಲ ಸಹಿತದಿ
ಗರ್ಜನೆಗೈಯ್ಯುತ ಗುಡುಗುತ ಮೇರೆದನು ॥ ೩೬೦ ॥

ಕೊಡಲೆ ಬಿಟ್ಟನು ತಾಮಸ ಅಸ್ತ್ರವ
ಅತಿಅತಿ ಘೋರವು ಶತ್ರು ದಾರುಣವು
ಬ್ರಹ್ಮನು ತಾನೇ ನಿರ್ಮಿಸಿದಸ್ತ್ರವು
ಹುರುಪಳಿಸುತ್ತಲು ಸುಟ್ಟಿತು ಕಪಿಗಳ ॥ ೩೬೧ ॥

ವಾನರ ಸೇನೆಯ ಹಾಹಾಕಾರವ
ನೋಡುತ ಬಂದನು ರಾಮನು ಆಗಲೆ
ಸಂಗಡ ಇದ್ದನು ಲಕ್ಷ್ಮಣ ಕೂಡಾ
ರಾವಣ ರಾಮನು ಬಂದರು ಎದುರಿಗೆ ॥ ೩೬೨ ॥

ಕಾಣುತ ಒಬ್ಬರನೊಬ್ಬರು ಆವರು
ಉಕ್ಕಿತು ಮೈಯಲಿ ಶೌರ್ಯದ ಹೊನಲು
ರಾಮನು ಮಾಡಿದ ಬಿಲ್ಲಿನ ಠೇಂಕರ
ರಣವದು ನಡುಗಿತು ಸಪ್ಪಳದಿಂದಲಿ ॥ ೩೬೩ ॥

ಲಕ್ಷ್ಮಣ ಬಂದನು ಮುಂದಕೆ ಕೂಡಲೆ
ಬಿಟ್ಟನು ಶರಗಳ ರಾವಣನೆಡೆಗೆ
ತಟ್ಟನೆ ಮುರಿಯುತ ರಾವಣ ನಡುವೆಯೆ
ಒಂದನು ರಭಸದಿ ಮುಂದಕೆ ಹಾಗೆಯೆ ॥ ೩೬೪ ॥

ಲಕ್ಷ್ಮಣ ಬಿಟ್ಟನು ಬಾಣದ ಸರವನು
ಅಸ್ತ್ರಗಳಿದ್ದವು ಭೀಕರ ನಿಶಿತವು
ಆದರೆ ರಾವಣ ಗಣನೆಗೆ ತಾರದೆ
ನಡುವೆಯೆ ತಡೆಯುತ ತುಂಡನು ಮಾಡಿದ ॥ ೩೬೫ ॥

ಹಾಗೆಯೆ ಶರಗಳ ಬಿಡುತಲಿ ರಾವಣ
ಲಕ್ಷ್ಮಣನನ್ನೂ ಗಣನೆಗೆ ತಾರದೆ
ಬಂದನು ರಾಮನ ಎದುರಿಸಲೆಂದು
ಎದುರಿಗೆ ಒಂದರು ಕಡುಗಲಿ ಇಬ್ಬರು ॥ ೩೬೬ ॥

ರಾಮ-ರಾವಣರ ಯುದ್ಧ :

ಎಂದೂ ಸೋಲನು ಅರಿಯದ ವೀರರು
ರಾಮ ರಾವಣರು ಬಿಟ್ಟರು ಶರಗಳ
ಕತ್ತರಿಸುತ್ತಲಿ ವೈರಿಯ ಶರಗಳ
ತುಂಬಿದರೆಲ್ಲೆಡೆ ಬಾಣದ ಜಾಲವ ॥ ೩೬೭ ॥

ಕಾಳಗ ಹೊಂದಿತು ಭೀಷಣ ರೂಪವ
ಮಂಡಲ ಗತಿಯಲಿ ತಿರುಗುತ ಇಬ್ಬರು
ಸರಳಿನ ಮಳೆಯನು ಕರೆಯುತಲಿದ್ದರು
ಕಾದುತಲಿದ್ದರು ಸಮಬಲರಿಬ್ಬರು ॥ ೩೬೮ ॥

ರಾವಣ ಬಾಣವು ಬರುತಲಿ ತೇಜದಿ
ನಟ್ಟಿತು ರಾಮನ ಹಣೆಯಲಿ ಆಗಲೆ
ವಿಚಲಿತನಾಗದೆ ರಾಮನು ಬಿಟ್ಟನು
ರೌದ್ರಾಸ್ತ್ರವನು ಮಂತ್ರವ ಜಪಿಸುತ ॥ ೩೭೯ ॥

ಹೋಗುತ ಅಸ್ತ್ರವು ಬಡಿಯಿತು ಎದೆಗೆ
ಹಾಗೆಯೆ ಬಿದ್ದಿತು ವಿಫಲವು ಆಗುತ
ಬಿಡುತಲಿ ಒಂದನು ಕ್ರೂರಾಸ್ತ್ರವನು
ನೆಟ್ಟನು ಬಾಣವ ರಾವಣ ಹಣೆಗೆ ॥ ೩೭೦ ॥

ರಾವಣ ಚಿಮ್ಮಿದ ಅಸುರಾಸ್ತ್ರವನು
ಆದರಲಿ ಹೊರಟವು ಶತಶತ ಶರಗಳು
ಸಿಂಹ ಹುಲಿ ತೋಳ ಹದ್ದು ಗಿಡಗ ನರಿ
ಅಲ್ಲದೆ ಕ್ರೂರದ ಪಶುಗಳ ಮುಖದಲಿ ॥ ೩೭೧ ॥

ಬಂದವು ಶರಗಳು ಮುತ್ತುತ ಕಪಿಗಳ
ಅಲ್ಲದೆ ಬಂದವು ಮೊಸಳೆ ಸರ್ಪಗಳ
ಮುಖವನು ಹೊಂದುತ ಬಾಣಗಳೆಷ್ಟೋ
ತಡೆಯಲು ಇವುಗಳ ರಾಮನು ಬಿಟ್ಟನು ॥ ೩೭೨ ॥

ಆಗ್ನೇಯಾಸ್ತ್ರವ ತೇಜದ ಸಹಿತದಿ
ಉರಿಯುವ ಬೆಂಕಿಯ ರೂಪದಿ ಹೊರಟವು
ಸೂರ್ಯ ಚಂದ್ರ ಗ್ರಹ ಧೂಮಕೇತು ಸಹ
ಅರ್ಧಚಂದ್ರದಲಿ ಉಲ್ಕೆಗಳಂತೆಯೆ ॥ ೩೭೩ ॥

ಮಿಂಚಿನ ನಾಲಿಗೆ ಇರುತಿಹ ಶರಗಳು
ಹುಟ್ಟಿದವೆಲ್ಲವು ಅಗ್ನಿಯ ಅಸ್ತ್ರದಿ
ರಾವಣ ಬಿಟ್ಟಿಹ ಶರಗಳ ಮುರಿಯುತ
ಅಸುರ ಅಸ್ತ್ರದ ವಿಫಲತೆಗೈದವು || ೩೭೪ ||

ಕಾಣುತ ಅಸುರ ಅಸ್ತ್ರದ ವಿಫಲತೆ
ರೋಷವು ಉಕ್ಕಿತು ರಾವಣಗಾಗಲೆ
ರಾವಣ ಬಿಟ್ಟನು ಮಯ ನಿರ್ಮಿತವಿಹ
ರೌದ್ರಾಸ್ತ್ರವನೇ ರಾಮನ ಮೇಲೆ || ೩೭೫ ||

ಕೂಡಲೆ ಹೊರಟವು ಬಾಣದ ತುದಿಯಿಂ
ವಜ್ರಾಯುಧದಲಿ ಬೆಳಗುವ ಆಯುಧ
ಮುಸಲ ಗದೆ ಶೂಲ ಕೂಟಪಾಶವೂ
ಅಲ್ಲದೆ ಅಶನಿಯ ತೆರದಲಿ ಆಯುಧ || ೩೭೬ ||

ಸಿಡಿಯುತ ಬಂದವು ಚಂಡಮಾರುತದಿ
ರಾಮನು ಸೆಳೆದನು ಗಂಧರ್ವಾಸ್ತ್ರವ
ಪ್ರತಿಹತವಾಯಿತು ರೌದ್ರಾಸ್ತ್ರವವೂ
ಕೆರಳುತ ರಾವಣ ಬಿಟ್ಟನು ಕೂಡಲೆ || ೩೭೭ ||

ಸೌರಾಸ್ತ್ರವನೂ ಹೂಡುತ ಬಿಲ್ಲಿಗೆ
ಧಗಧಗಿಸುತಲಿಹ ಚಕ್ರಾಯುಧಗಳು
ಬಂದವು ಗಿರಗಿರ ತಿರುಗುತ ಅವುಗಳು
ರಾಮನು ಖಂಡಿಸಿ ಕೆಡವಿದ ಅವುಗಳ || ೩೭೮ ||

ಆಗಲೆ ಬಂದನು ಲಕ್ಷ್ಮಣ ಮುಂದಕೆ
ಬಿಟ್ಟನು ತಾನೇ ಬಾಣದ ಬಲೆಯನು
ರಾವಣ ಧ್ವಜವನು ಮುರಿಯುತ ಬಾಣದಿ
ಸಾರಥಿ ತಲೆಯನು ತರಿದನು ಆಗಲೆ || ೩೭೯ ||

ಬಿಡುತಲಿ ಕೂಡಲೆ ಪಂಚ ಶರಗಳನು
ರಾವಣ ಕೈಯಲಿ ಕಾರ್ಮುಕ ಮುರಿದನು
ಬಂದನು ವಿಭೀಷಣನೂ ಅಲ್ಲಿಗೆ
ಗದೆಯನು ಬೀಸುತ ಕೊಂದನು ಹಯಗಳ || ೩೮೦ ||

ತಮ್ಮನ ಕಾಣುತ ರೋಷವು ಉಕ್ಕಿತು
ಹಿರಿಯುತ ರಾವಣ ಶಕ್ತ್ಯಾಯುಧವನು
ಬಿಟ್ಟನು ನೇರಕೆ ವಿಭೀಷಣ ಮೇಲೆ
ಲಕ್ಷ್ಮಣ ನಡುವೆಯೆ ಮುರಿದನು ಅದನು || ೩೮೧ ||

**ರಾವಣನಿಂದ ಶಕ್ತ್ಯಾಯುಧದ ಪ್ರಯೋಗ :**

ರಾವಣ ರೋಷದಿ ಹಿರಿದನು ಆಯುಧ
ಇರುವದು ಅದುವೇ ಮಹಾಶಕ್ತಿಯು
ಯಮನಿಗು ತಡೆಯಲು ಸಾಧ್ಯವೆ ಇಲ್ಲವು
ಗುರಿಯನು ಇಟ್ಟನು ವಿಭೀಷಣನೆದೆಗೆ || ೩೮೨ ||

ಅಮೋಘವಾಗಿಹ ಶಕ್ತ್ಯಾಯುಧವು
ಮಿಂಚಿತು ಉರಿಯಿತು ಪ್ರಜ್ವಲವಾಯಿತು
ಕಂಡಿತು ಭೀಕರ ಶಕ್ತಿಯು ಆದರಲಿ
ಲಕ್ಷ್ಮಣ ನಿಂತನು ವಿಭೀಷಣ ಮುಂದೆ || ೩೮೩ ||

ನೋಡುತ ಈ ಪರಿ ರಾವಣನೆಂದನು
ಎನ್ನಯ ತಮ್ಮನ ಉಳಿಸಲು ನೀನೇ
ಎದೆಯನು ನೀಡುವಿಯಲ್ಲವೆ ಲಕ್ಷ್ಮಣ
ಆಗಲಿ ಬಿಡುವೆನು ನಿನ್ನಯ ಎದೆಗೇ || ೩೮೪ ||

ಮೆಚ್ಚಿದೆ ನಿನ್ನಯ ಶೌರ್ಯವ ಧೈರ್ಯವ
ಸೆಳೆಯುವದಿದುವೇ ನಿನ್ನಯ ಪ್ರಾಣವ
ಶಕ್ತಿಯ ಆಯುಧ ಮಯನೇ ನಿರ್ಮಿಸಿ
ಮಾಯಾ ಶಕ್ತಿಯನೆಲ್ಲವ ತುಂಬಿಹ || ೩೮೫ ||

ಎನ್ನುತ ರಾವಣ ಬೀಸುತ ಬಿಟ್ಟನು
ಶಕ್ತ್ಯಾಯುಧವನು ಲಕ್ಷ್ಮಣನೆದೆಗೆ
ರಾಮನು ನೋಡುತ ಶುಭವೇ ಆಗಲಿ
ಆಯುಧ ಶಕ್ತಿಯು ವಿಫಲವು ಆಗಲಿ || ೩೮೬ ||

ಎನ್ನುತ ರಾಮನು ನುಡಿದನು ಅದಕೆ
ಭೀಕರ ರೂಪದಿ ಬಡಿಯಿತು ಆಯುಧ
ಲಕ್ಷ್ಮಣ ಬಿದ್ದನು ಉರುಳುತ ನೆಲದಲಿ
ನೋಡುತ ಈ ಪರಿ ರಾಮನು ಸಿಡಿಯುತ || ೩೮೭ ||

ಬಂದನು ಲಕ್ಷ್ಮಣ ಹತ್ತಿರ ಆತನು
ಕಿತ್ತುತ ಶಕ್ತಿಯ ಮುರಿದನು ಆಗಲೆ
ಇಲ್ಲದೆ ಹೋದರೆ ಶಕ್ತಿಯು ಮತ್ತೆ
ಹೋಗುತಲಿದ್ದಿತು ರಾವಣನೆಡೆಗೆ || ೩೮೮ ||

ನಂತರ ನಡೆಯಿತು ಕಾಳಗ ಅವರಲಿ
ರಾಮನ ಉಜ್ವಲ ಶರಗಳ ಹೊಡೆತಕೆ
ತಡೆಯದೆ ರಾವಣ ಸರಿಯುತ ಹಿಂದಕೆ
ನಡೆದನು ಹಾಗೆಯೆ ಲಂಕೆಯ ಒಳಗಡೆ || ೩೮೯ ||

**ಶ್ರೀರಾಮನ ಶೋಕ :**

ರಾಮನು ಬಂದನು ಲಕ್ಷ್ಮಣನೆಡೆಗೆ
ನೆತ್ತರ ಹರಿದಿದೆ ದೇಹದ ತುಂಬಾ
ಹೊರಳುವ ನರಳುವ ಯಾತನೆಯಿಂದಲಿ
ರಾಮನು ತಡೆಯನು ತಮ್ಮನ ಯಾತನೆ || ೩೯೦ ||

ಉಕ್ಕಿತು ದುಃಖವು ಕಂಬನಿ ತುಂಬಿತು
ತಮ್ಮನ ರಕ್ಷಿಸಲಾರದೆ ಹೋದೆನು
ನಿನ್ನನು ತೊರೆಯುತ ಇರುವದು ಸಾಧ್ಯವೆ
ನೀನೇ ಇಲ್ಲದೆ ರಾಜ್ಯವು ಏತಕೆ? || ೩೯೧ ||

ಮಾತೆಯರೆಲ್ಲರು ಭರತನು ಕೂಡಾ
ಕೇಳಿದರೆನಗದು ಹೇಳುವದೇನು
ಯಾರೇ ಆಗಲಿ ಜಗದಲಿ ಸಿಗುವರು
ನಿನ್ನಯ ತೆರನಿಹ ತಮ್ಮನು ಸಿಗುವನೆ? || ೩೯೨ ||

ರಾಜ್ಯವ ಬಿಡುತಲಿ ಭೋಗವ ಬಿಡುತಲಿ
ಕಾಡಿಗೆ ಬರುತಲಿ ಸೇವೆಯ ಮಾಡಿದೆ
ಇಂತಹ ತಮ್ಮನ ಉಳಿಸಲು ಆಗದೆ
ಹೇಡಿಯ ತೆರದಲಿ ಊರಿಗೆ ತಿರುಗಲೆ ? || ೩೯೩ ||

ಹೋಗುವ ಬದಲಿಗೆ ಸಾಯುವೆ ಇಲ್ಲಿಯೆ
ಹಿಂದಿನ ಜನ್ಮದ ಪಾಪವು ಇರುವದೆ
ಧರ್ಮದ ರೀತಿಲಿ ನಡೆದಿಹ ಇವನಿಗೆ
ಇಂತಹ ಗತಿಯದು ಬಂದುದು ಏತಕೆ ? || ೩೯೪ ||

ಸುಷೇಣನಾಗಲಿ ಬರುತಲಿ ಅಲ್ಲಿಗೆ
ರಾಮನೆ ಏನಿದು ಶೋಕವು ಏತಕೆ
ಲಕ್ಷ್ಮಣ ಮೃತನು ಆಗಿಯೆ ಇಲ್ಲವು
ಮುಖದಲಿ ಕಾಂತಿಯು ಇನ್ನೂ ಇರುವದು || ೩೯೫ ||

ಎನ್ನುತ ತಿರುಗಿದ ಹನುಮನ ಕಡೆಗೆ
ಮಾರುತಿ ಧಾವಿಸು ಔಷಧ ಗಿರಿಗೆ
ಹಿಂದೆಯೆ ಹೇಳಿಹ ಜಾಂಬವ ಎಲ್ಲವ
ದಕ್ಷಿಣ ಶಿಖರದಿ ಮೂಲಿಕೆ ಇರುವವು || ೩೯೬ ||

ಶಲ್ಯಬಾಧೆಯನು ಕಳೆಯಲು ಬೇಕಿದೆ
ವಿಶಲ್ಯಕರಣಿಯು ಸಾವರ್ಣಕರಣಿಯು
ಅಲ್ಲದೆ ತಂದಿರು ಸಂಜೀವನಿಯನು
ಮರೆಯಲು ಬೇಡಾ ಸಂಧಾನಕರಣಿಯ || ೩೯೭ ||

ನೆಗೆಯುತ ಮುಟ್ಟಿದ ಔಷಧಿ ಪರ್ವತ
ಕಾಣದೆ ಮೂಲಿಕೆ ಯೋಚನೆ ಮಾಡುತ
ಕಿತ್ತುತ ಪರ್ವತ ತಂದನು ಲಂಕೆಗೆ
ಸುಷೇಣ ಹೊಗಳುತ ತೆಗೆದನು ಮೂಲಿಕೆ || ೩೯೮ ||

ರಸವನು ತೆಗೆಯುತ ಹಿಂಡಿದ ಮೂಗಲಿ
ಲಕ್ಷ್ಮಣ ಎದ್ದನು ಬಾಧೆಯು ಕಳೆಯುತ
ವಾನರ ಸೇನೆಯು ಹೊಗಳಿತು ವೈದ್ಯನ
ರಾಮನು ಬಿಗಿಯುತ ಅಪ್ಪಿದ ತಮ್ಮನ ॥ ೩೯೯ ॥

**ಲಕ್ಷ್ಮಣನ ಬಗೆಗೆ ಶ್ರೀರಾಮನ ಅಭಿಪ್ರಾಯ :**

ಲಕ್ಷ್ಮಣ ತಮ್ಮನೆ ಕಂಡೆನು ಮತ್ತೆ
ಸಾವಿನ ದವಡೆಯ ಸೇರುತ ಬಂದುದು
ನೀನೇ ಇಲ್ಲದೆ ಎನ್ನಯ ಬದುಕಿಗೆ
ಅರ್ಥವೆ ಇಲ್ಲವು ತಿಳಿ ನೀ ನಿಜಕೂ ॥ ೪೦೦ ॥

ಎನ್ನಯ ಬದುಕೂ ಜಯವೂ ಕೂಡಾ
ಅಲ್ಲದೆ ಸೀತೆಯು ಎಲ್ಲವು ನಿಜಕೂ
ತಣಿಸದು ಎನ್ನನು ನಿನ್ನಯ ಹೊರತು
ರಾಜ್ಯದ ಇಷ್ಟವು ಕೂಡಾ ಇಲ್ಲವು ॥ ೪೦೧ ॥

ಲಕ್ಷ್ಮಣನೆಂದನು ಅಣ್ಣನೆ ಏನಿದು
ಸ್ಮರಣೆಗೆ ತರುತಲಿ ನೆನಪಿಸು ಪ್ರತಿಜ್ಞೆ
ಕಿರುಕಳ ಮನುಜನ ತೆರದಲಿ ಶೋಕವು
ಸಲ್ಲದು ಎಂದೂ ಅಗ್ರಜ ನಿನಗೆ ॥ ೪೦೨ ॥

**ರಾವಣನ ವಧೆಯನ್ನು ಯೋಚಿಸಲು ಲಕ್ಷ್ಮಣನು ಕೇಳುವದು :**

ಎನ್ನಯ ಕಾರಣ ನಿರಾಶೆ ಸಲ್ಲದು
ಆಗಿಹೆ ಈಗಲೆ ಮೊದಲಿನ ತೆರದಲಿ
ನಿನ್ನಯ ಬಾಣಕೆ ಯಾವನು ಈಡು
ರಾವಣ ವಧೆಯನು ಯೋಚಿಸು ಕೂಡಲೆ ॥ ೪೦೩ ॥

ರಾಮನು ಎದ್ದನು ಬಿಲ್ಲನು ಹಿಡಿಯುತ
ಗೈದನು ಝುಂಕಾರ ರಣದಲಿ ಡುಮಿಸುತ
ರಾವಣ ಬಂದನು ಜೇರಿಯ ರಥದಲಿ
ಸುರಿಸುತ ಕೂರ್ಗಣೆ ಘೋರ ವರ್ಷ ಯೆ ॥ ೪೦೪ ॥

ರಾವಣ ರಥದಲಿ ನಿಂತಿಹ ಸುರಕ್ಷಿತ
ರಾಮನು ನಿಂತಿಹ ನೆಲದಲಿ ಅರಕ್ಷಿತ
ದೇವರು ದಾನವ ಗಂಧರ್ವರು ಸಹ
ಅಂದರು ಇದುವೇ ಅಕ್ರಮ ಯುದ್ಧವು ॥ ೪೦೫ ॥

ಶ್ರೀರಾಮನಿಗೆ ಇಂದ್ರನು ತನ್ನ ರಥವನ್ನು ಕಳಿಸುವುದು :

ಬಿದ್ದಿತು ಈ ನುಡಿ ಇಂದ್ರನ ಕಿವಿಗೆ
ಕೂಡಲೆ ಕಳಿಸಿದ ತನ್ನಯ ರಥವನು
ಮಾತಲಿ ಸಾರಥಿ ಈಗಲೆ ಹೋಗುತ
ರಾಮನ ಸಾರಥಿಯಾಗುತ ನಡೆಸು ॥ ೪೦೬ ॥

ಮಾತಲಿ ಎಂದನು ಅಪ್ಪಣೆ ದೇವನೆ
ಈಗಲೆ ಹೋಗುತ ಸಾರಥಿಯಾಗುವೆ
ಎನ್ನುತ ಹೂಡಿದ ಹಸಿರು ಹಯಗಳನು
ತರುತಲಿ ರಾಮನ ಎದುರಿಗೆ ಅಂದನು ॥ ೪೦೭ ॥

ರಾಘವ ನಿನ್ನಯ ವಿಜಯಕೆ ಎಂದು
ಇಂದ್ರನು ಕಳಿಸಿಹ ತನ್ನಯ ರಥವನು
ನಾನೇ ಮಾತಲಿ ಸಾರಥಿ ಅವನಿಗೆ
ನಿನಗೂ ನಾನೇ ಸಾರಥಿಯಾಗುವೆ ॥ ೪೦೮ ॥

ಅಲ್ಲದೆ ಕಳಿಸಿಹ ಮಹಾ ಚಾಪವನು
ಅಗ್ನಿಗೆ ಸರಿಸಮ ಕವಚವ ಕೂಡಾ
ಸೂರ್ಯನ ತೆರದಲಿ ಹೊಳೆಯುವ ಶರಗಳ
ಸ್ವಚ್ಛವು ತೀಕ್ಷ್ಣದ ಶಕ್ತ್ಯಾಯುಧವನು ॥ ೪೮೯ ॥

ರಾಮನು ಮಾಡಿದ ಪ್ರದಕ್ಷಿಣೆಯನು
ನಮಿಸುತ ಏರಿದ ರಥವನು ಅಲ್ಲಿಯೆ
ಯುದ್ಧವು ಸಾಗಿತು ರಭಸದಿ ಅಗಲೆ
ಅಸ್ತ್ರಕೆ ಅಸ್ತ್ರವು ಸಿದ್ಧವೆ ಇದ್ದವು ॥ ೪೧೦ ॥

**ರಾಮ-ರಾವಣರ ಭೀಕರ ಯುದ್ಧ :**

ರಾವಣ ಹೂಡಿದ ಸರ್ಪಾಸ್ತ್ರವನು
ಬೆಂಕಿಯನುಗುಳುವ ಭುಜಂಗಗಳೆಲ್ಲ
ಬಂದವು ಕಾರುತ ವಿಷವನು ಎಲ್ಲೆಡೆ
ತುಂಬಿತು ರಣವೂ ಗಗನವು ಸರ್ಪದಿ ॥ ೪೧೧ ॥

ರಾಮನು ಬಿಟ್ಟನು ಗರುಡಾಸ್ತ್ರವನು
ಚಿನ್ನದ ಗರಿಗಳ ಕಾಂಚನಮಯವಿಹ
ಗರುಡನ ಸೇನೆಯು ಕುಕ್ಕುತ ಸರ್ಪದ
ಭಕ್ಷಣ ಮಾಡುತ ಕೊಂದವು ಹಾವನು ॥ ೪೧೨ ॥

ಸಿಟ್ಟಲಿ ರಾವಣ ಸುರಿಸುತ ಶರಗಳ
ರಾಮನ ನೋಯಿಸಿ ಮಾತಲಿ ಪೀಡಿಸಿ
ಕಾಂಚನ ಧ್ವಜವನು ಕತ್ತರಿಸುತ್ತಲಿ
ಇಂದ್ರನ ಹಯಗಳ ಗಾಯವಗೊಳಿಸುತ ॥ ೪೧೩ ॥

ಸಾಹಸ ತೋರಿದ ಮೇರೆಯ ಮೀರುತ
ರಾವಣ ಎಸೆದನು ಶೂಲಾಯುಧವನು
ಸಿಡಿಲಿನ ತೆರದಲಿ ಬರುತಿಹ ಅದುವೇ
ಹೊಂದಿದೆ ಅದ್ಭುತ ಬಲವನು ಶಕ್ತಿಯ ॥ ೪೧೪ ॥

ವಿಧ್ವಂಸಗೊಳಿಪ ಶಕ್ತಿಯು ಅಪಾರ
ಮಾಡುತ ಭೀಕರ ಭೈರವ ನಾದವ
ಕೂಗುತ ರಾಮನೆ ಸ್ವೀಕರಿಸು ಇದನು
ಎನ್ನುತ ಬೀಸಿದ ಶೂಲಾಯುಧವನು ॥ ೪೧೫ ॥

ಬಂದಿತು ಶೂಲವು ಮಿಂಚಿನ ಗೊಂಚಲು
ಗಗನ ಮಾರ್ಗದಲಿ ಘೋರ್ಗರೆಯುತ್ತಲಿ
ರಾಮನು ತಡೆಯಲು ಬಿಟ್ಟನು ಶರಗಳ
ಆದರೆ ಅದುವೇ ಸುಟ್ಟಿತು ಶರಗಳ ॥ ೪೧೬ ॥

ಶರಗಳ ವಿಫಲತೆ ಕಾಣುತ ರಾಮನು
ಕ್ರೋಧದಿ ಎತ್ತಿದ ಇಂದ್ರನು ಕೊಟ್ಟಿಹ
ಶಕ್ತಿಯ ಆಯುಧ ಗಿರಿಗಿರಿ ತಿರುಗಿಸಿ
ಬೀಸಿದ ರಭಸದಿ ಶೂಲದ ಕಡೆಗೆ ॥ ೪೧೭ ॥

ಶಕ್ತಿಯು ಹೊಡೆತಕೆ ಶೂಲವು ಮುರಿಯಿತು
ಕಾಂತಿಯು ಕುಂದುತ ಬಿದ್ದಿತು ಕೆಳಗಡೆ
ರಾಮನು ಬಿಡುತಲಿ ತೀಕ್ಷ್ಣ ಬಾಣಗಳ
ರಾವಣ ತನುವನು ತರಿದನು ಎಲ್ಲೆಡೆ ॥ ೪೧೮ ॥

ಮೈಯಲಿ ನೆತ್ತರ ಹರಿಯಿತು ಅತಿಶಯ
ಅರಳಿದ ಅಶೋಕ ವೃಕ್ಷದ ತೆರದಲಿ
ಮೆರೆದನು ರಾವಣ ಸೇನೆಯ ಮಧ್ಯದಿ
ಕಣ್ಣುಗಳಾದವು ಕೆಂಡದ ಉಂಡೆಯು || ೪೧೯ ||

**ರಥದಲ್ಲಿ ರಾವಣನ ಕುಸಿತ :**

ನಡೆಯಿತು ಇನ್ನೂ ಭೀಕರ ಕಾಳಗ
ರಾವಣ ಬಾಣದ ಜಾಲವ ಮುರಿಯುತ
ರಾಮನ ಶರಗಳ ವೇಗವು ಹೆಚ್ಚಲು
ದಣಿಯುತ ರಾವಣ ಕುಸಿದನು ರಥದಲಿ || ೪೨೦ ||

**ಸಾರಥಿಯು ರಾವಣನನ್ನು ಸುರಕ್ಷಿತ ಸ್ಥಳಕ್ಕೆ ಒಯ್ಯುವದು :**

ಕಾಣುತ ರಾವಣ ಪರಿಯನು ಸಾರಥಿ
ಕೂಡಲೆ ರಥವನು ಹೊರಳಿಸಿ ಒಯ್ದನು
ಯುದ್ಧದ ರಂಗದ ಬೇರೆಯ ಭಾಗಕೆ
ರಾಮನ ಶರಗಳ ಏಟನು ತಪ್ಪಿಸಿ || ೪೨೧ ||

ಕೂಡಲೆ ರಾವಣ ಚೇತನ ಹೊಂದಿದ
ಏಳುತ ನೋಡಿದ ಬಯಲನು ಸುತ್ತಲು
ರಥವದು ಬಂದಿದೆ ರಣದಿಂ ಹೊರಗಡೆ
ಕ್ರೋಧದಿ ಕೇಳಿದ ಸಾರಥಿಗಾಗಲೆ || ೪೨೨ ||

**ಸಾರಥಿಯನ್ನು ರಾವಣನು ಹೀಯಾಳಿಸುವದು**

ಏನಿದು ಸಾರಥಿ ಮಾಡಿದುದೇನದು
ಎನ್ನನು ಹೇಡಿಯು ಅಲ್ಪನು ಅಶಕ್ತ
ಸತ್ವಶೂನ್ಯನೂ ತೇಜೋರಹಿತನು
ಪೌರುಷಹೀನನು ಎಂದೂ ತಿಳಿದೆಯಾ || ೪೨೩ ||

ಎನ್ನಲಿ ಮಾಯಾ ಶಕ್ತಿಗಳಿಲ್ಲವು
ಮಂತ್ರಾಸ್ತ್ರಗಳೂ ಗತಿಸಿದವೆಂದೆಯಾ
ಎನ್ನಯ ಯೋಗ್ಯತೆ ತಿಳಿಯದೆ ನೀನು
ವೈರಿಯ ಎದುರಿಗೆ ಹಿಂದಕೆ ತಂದುದು || ೪೨೪ ||

ಎನ್ನಯ ಕೀರ್ತಿಗೆ ಕಲಂಕ ಹಚ್ಚಿದೆ
ಖ್ಯಾತನು ಯುದ್ಧದಿ ಎದುರಿಗೆ ಇರಲು
ಹಿಂದಕೆ ಬಂದುದು ಹೇಡಿಯ ಕೆಲಸವು
ವೈರಿಯ ಹಸ್ತಕಸಿರುತಿಹೆ ಏನು ? || ೪೨೫ ||

**ಸಾರಥಿಯ ಉತ್ತರ :**

ಈಗಲೆ ಎನ್ನಯ ರಥವನು ಒಯ್ಯುತ
ರಾಮನ ಎದುರಿಗೆ ಕೂಡಲೆ ನಿಲ್ಲಿಸು
ಎನ್ನಲು ಅಂದನು ಸಾರಥಿ ವಿನಯದಿ
ರಾಜನೆ ಅಂತಹ ಯೋಚನೆ ಇಲ್ಲವು || ೩೨೬ ||

ಒಡೆಯನ ಕಾಯುವ ಸಾರಥಿ ನಿಜಕೂ
ಯೋಗ್ಯನು ಅಲ್ಲವೆ ಹೇಳಿರಿ ದೊರೆಯೆ
ರಣದಲಿ ದಣಿವನು ಹೊಂದುತ ಬಳಲುತ
ಕುಸಿಯಲು ರಥದಲಿ ತಂದೆನು ಇಲ್ಲಿಗೆ || ೪೨೭ ||

ಸಮಯವ ಕಾಯುತ ಮುತ್ತಲು ಬೇಕು
ವಿರೋಧ ಹೆಚ್ಚಲು ಸರಿಯಲು ಬೇಕು
ನಿಮಗೂ ಹಯಕೂ ವಿರಾಮ ದೊರೆಯಲು
ತಂದೆನು ಇಲ್ಲಿಗೆ ನೀತಿಯ ಅರಿಯುತ || ೪೨೮ ||

ರಾವಣ ಕೇಳುತ ಸಾರಥಿಯನುಡಿಯನು
ಆಗಲಿ ಹೊರಳಿಸು ಕೂಡಲೆ ರಥವನು
ಎನ್ನಲು ಹೊರಟಿತು ರಭಸದಿ ರಥವು
ನಿಂತಿತು ಆಗಲೆ ರಾಮನ ಸಮ್ಮುಖ ॥ ೪೨೯ ॥

**ಶ್ರೀರಾಮನ ಯೋಚನೆ :**

ರಾಮನು ನಿಂತಿಹ ಯೋಚನೆ ಮಾಡುತ
ರಕ್ಕಸ ರಾಜನ ಕೊಲ್ಲುವ ಮಾರ್ಗವು
ಯಾವದು ಎಂಬುದು ತಿಳಿಯದು ಇನ್ನೂ
ಬಿಟ್ಟಿಹ ಅಸ್ತ್ರಗಳೆಲ್ಲವು ವಿಫಲವು ॥ ೪೩೦ ॥

**ಅಗಸ್ತ್ಯ ಮುನಿಗಳಿಂದ ಆದಿತ್ಯಹೃದಯದ ಉಪದೇಶ :**

ಗಗನದಿ ನೋಡಲು ಆಗಸ್ತ್ಯ ಮುನಿಗಳು
ಬಂದರು ರಾಮನ ಹತ್ತಿರ ಮೆಲ್ಲಗೆ
ರಾಮನೆ ಹೇಳುವೆ ರಹಸ್ಯ ಮಂತ್ರವ
ಜಪಿಸುತ ಮಂತ್ರವ ವಿಶ್ವವ ಗೆಲ್ಲು ॥ ೪೩೧ ॥

ವೈರಿಯ ನಾಶಕೆ ಬಲಯುತ ಮಂತ್ರವು
ಅಲ್ಲದೆ ಇರುವದು ಬಹು ಪುಣ್ಯಕರವು
ಹೆಸರಿದೆ ಮಂತ್ರಕೆ ಆದಿತ್ಯಹೃದಯ
ಕಾರ್ಯಕೆ ಸಿದ್ಧಿಯು ರಕ್ಷೆಯು ಫಲವಿದೆ ॥ ೪೩೨ ॥

ಜಪಿಸುತಲಿದ್ದರೆ ಸತ್ಯವು ಇದನು
ಮಂಗಳವಾಗುತ ಪಾಪವು ಹೋಗುತ
ನೀಗುತ ಚಿಂತೆಯ ಶೋಕಗಳೆಲ್ಲವ
ಆಯುವು ಬೆಳೆಯುವ ಸಂತಸ ಮಂತ್ರವು ॥ ೪೩೩ ॥

ಮಂತ್ರದ ದೇವತೆ ಸೂರ್ಯನು ಇರುವನು
ಉದಯದ ರವಿಯನು ಪೂಜಿಸು ನಿತ್ಯವು
ಬ್ರಹ್ಮ ವಿಷ್ಣು ಶಿವ ಸ್ಕಂದ ಇಂದ್ರ ಯಮ
ಚಂದ್ರ ವರುಣ ಮನು ಕುಬೇರ ವಸುಗಳು || ೪೩೪ ||

ವಾಯು ವಹ್ನಿ ಸಹ ಪ್ರಾಣವಾಯುವೂ
ಅಶ್ವಿನಿ ದೇವತೆ ಮರುತ್ತು ಕೂಡಾ
ಪ್ರಜಾಪತಿಗಳೂ ಪಿತೃಗಳಲ್ಲದೆ
ಸೂರ್ಯನು ಎಲ್ಲರು ಆದಿತ್ಯನೆ ಸರಿ || ೪೩೫ ||

ಅದಿತಿಯ ಪುತ್ರನು ಭೂಮಿಯ ಒಡೆಯನು
ಜಗವನು ಸೃಷ್ಟಿಸಿ ಕರ್ಮವ ಪ್ರೇರಿಸಿ
ಲೋಕಕೆ ಮಳೆಯನು ಕೊಡುತಿಹ ಈತನು
ಚಿನ್ನದ ಕಿರಣದಿ ಹೊಳೆಯುವನೀತನು || ೪೩೬ ||

ಹಿರಣ್ಮಯವಿಹ ಬ್ರಹ್ಮಾಂಡ ಮಾಡಿ
ಬೆಳಕಿನ ಹಗಲನು ಕೊಟ್ಟಿಹನೀತನು
ಏಳು ಕಿರಣಗಳ ಹಯಗಳ ಹೂಡುತ
ಸಂತಸಮೂಲನು ದುಃಖವಿನಾಶಿಯು || ೪೩೭ ||

ಗರ್ಭದಿ ಅಗ್ನಿಯ ಧರಿಸಿಹನೀತನು
ವೇದದ ಪಾರವ ಕಂಡವನಿರುವನು
ಪಿಂಗಳ ನಾಡಿಯ ಪ್ರವರ್ತಕನಿರುತ
ಸಂಹಾರಕರ್ತನು ತೇಜೋರೂಪನು || ೪೩೮ ||

ರಕ್ತವರ್ಣನೂ ಸರ್ವಶಕ್ತನೂ
ತಾರಾಮಂಡಲ ಅಧಿಪತಿಯಾಗಿಹ
ಜ್ಯೋತಿಶ್ಚಕ್ರದ ಸ್ವಾಮಿಯು ಇರುವನು
ಜಯಕರ ಶುಭಕರ ಮಂಗಲಕರವಿಹ || ೪೩೯ ||

ಎನ್ನುತ ಆದಿತ್ಯಮಂತ್ರವ ಹೇಳುತ
ಅಂದರು ರಾಮಗೆ ಜಪಿಸು ಮೂರು ಸಲ
ಅಂದರೆ ನಿನಗೇ ಜಯವದು ಸಿದ್ಧವು
ರಾಘವ ಹಾಗೆಯೆ ಮಾಡುತ ನಿಂತನು || ೪೪೦ ||

ಮತ್ತೆ ರಾಮ-ರಾವಣರ ಯುದ್ಧ ಪ್ರಾರಂಭ :

ನಂತರ ಬಂದಿತು ರಾವಣ ರಥವು
ರಾಮನು ಎದುರಿಸಿ ನಿಂತನು ರಣದಲಿ
ಯುದ್ಧವು ನಡೆಯಿತು ಇಬ್ಬರ ನಡುವೆ
ಭೀಕರ ಭೀಕರ ಅತಿಶಯ ಭೀಕರ || ೪೪೧ ||

ಒಬ್ಬರನೊಬ್ಬರು ಕೊಲ್ಲಲು ಇಚ್ಛಿಸಿ
ಹೋರುವ ಅಜೇಯ ಕಲಿಗಳ ನೋಡುತ
ವಾನರ ರಕ್ಕಸ ವೀರರು ಎಲ್ಲರು
ನಿಂತರು ನೋಡುತ ಕಾದಲು ಮರೆಯುತ || ೪೪೨ ||

ಗಗನದಿ ನಿಂತರು ದೇವರು ಋಷಿಗಳು
ಪಿತೃಗಳು ಕೂಡಾ ನೋಡುತಲಿದ್ದರು
ಗಂಧರ್ವ ಚಾರಣರಲ್ಲದೆ ಇನ್ನೂ
ಎಷ್ಟೋ ದೇವರ ಕಣ್ಣಿಗೆ ಹಬ್ಬವು || ೪೪೩ ||

ರಾವಣ ಬಿಟ್ಟನು ಬಾಣವ ಧ್ವಜಕೆ
ತಪ್ಪಿತು ಗುರಿಯದು ಬಿದ್ದಿತು ನೆಲಕೆ
ರಾಮನು ಬಿಡುತಲಿ ನಿಶಿತ ಶರಗಳನು
ರಾವಣ ಧ್ವಜವನು ಚೆಲ್ಲಿದ ಮುರಿಯುತ ‖ ೪೪೪ ‖

ಸಿಟ್ಟಲಿ ರಾವಣ ಮಾಯಾ ಬಲದಲಿ
ಶಸ್ತ್ರಜಾಲವನು ನಿರ್ಮಿಸಿ ಬಿಟ್ಟನು
ಗದೆ ಚಕ್ರ ಪರಿಘ ಮುಸಲ ಪರಶುಗಳು
ವೃಕ್ಷ ಶೂಲಗಳು ಚಿಮ್ಮಿದವೆಲ್ಲೆಡೆ ‖ ೪೪೫ ‖

ಭೀಮಾಕೃತಿಯಲಿ ಭೀಮಧ್ವನಿಯಲಿ
ಭೀಕರ ಆಯುಧವೆಲ್ಲವು ಸಿಡಿಯುತ
ರಣದಲಿ ಹುಟ್ಟಿಸಿ ಹಾಹಾಕಾರವ
ಬಿಟ್ಟನು ಶರಗಳ ಅವಿರತವಾಗಿಯೆ ‖ ೪೪೬ ‖

ರಾಮನ ಶರಗಳು ಎದುರಿಸಿ ಅವುಗಳ
ಬೀಳುತಲಿದ್ದವು ಕತ್ತರಿಸುತ್ತಲಿ
ಅಂಬರವೆಲ್ಲವು ಮುಚ್ಚಿತು ಬಾಣದಿ
ಕಾಣುವದೆಲ್ಲೆಡೆ ಶರಗಳ ಜಾಲವು ‖ ೪೪೭ ‖

ಬಲಗೈ ಸೋತರೆ ಎಡಗೈಯಿಂದಲಿ
ಎಡಗೈ ಸೋತರೆ ಬಲಗೈಯಿಂದಲಿ
ಕಾದುತಲಿದ್ದರು ಕಲಿಗಳು ಇಬ್ಬರು
ಕ್ಷಣದಲಿ ಸಾಸಿರ ಶರಗಳ ಬಿಡುತಲಿ ‖ ೪೪೮ ‖

ಸಾರಥಿ ಇಬ್ಬರು ಅನುಪಮ ನಿಪುಣರು
ಗತ ಪ್ರತ್ಯಾಗತ ಮಂಡಲ ವೀಥಿ
ಎನ್ನುವ ಗತಿಗಳ ರೀತಿಯ ತೋರುತ
ನಡೆಸುತ ರಥಗಳ ನಿಪುಣತೆಯಿಂದಲಿ || ೪೪೯ ||

ತೋರಿದರನುಪಮ ದಕ್ಷತೆಯನ್ನೂ
ರಾವಣ ಕೆರಳುತ ಬಾಣವ ಬಿಡುತಲಿ
ಗಾಯವ ಮಾಡಿದ ಮಾತಲಿ ಸಾರಥಿ
ವಿಚಲಿತನಾಗದೆ ಇದ್ದನು ಆತನು || ೪೫೦ ||

ರಾಮನು ಕೋಪದಿ ಶರಗಳ ಸುರಿಸುತ
ಸರಿಸಿದ ಹಿಂದಕೆ ರಾವಣನಾಗಲೆ
ಶರಗಳ ಜಾಲದಿ ನಭವನು ತುಂಬುತ
ಕತ್ತಲೆಯಾಯಿತು ಸೂರ್ಯನ ಮುಚ್ಚುತ || ೪೫೧ ||

ಭೀಕರ ಯುದ್ಧವ ನೋಡುತ ಗಗನದಿ
ದೇವತೆ ಗಣವದು ಅಚ್ಚರಿ ಪಡುತಲಿ
ಸಾಗರಕುಪಮೆಯು ಸಾಗರವೊಂದೇ
ಆಗಸಕುಪಮೆಯು ಆಗಸವೊಂದೇ || ೪೫೨ ||

ರಾಮ-ರಾವಣರ ಯುದ್ಧವು ಎಂತದು
ಎನ್ನುತ ಕೇಳಲು ಉಪಮೆಯೆ ಇಲ್ಲವು
ರಾಮ-ರಾವಣರ ಯುದ್ಧವು ಮಾತ್ರವೆ
ರಾಮ-ರಾವಣರ ಯುದ್ಧದ ಅಂತೆಯೆ || ೪೫೩ ||

ಆಗಲೆ ರಾಮನು ಬಿಟ್ಟನು ಅಂಬನು
ವಿಷದಲಿ ಸರ್ಪಕೆ ಮೀರಿದುದಿದ್ದಿತು
ಹೋಗುತ ಅದುವೇ ಶಿರವನು ತರಿಯಿತು
ಉರುಳಿತು ಶಿರವದು ಕುಂಡಲ ಸಹಿತದಿ || ೪೫೪ ||

**ರಾವಣನ ಕಡಿದ ಶಿರಗಳು ಹುಟ್ಟಿಕೊಳ್ಳುವದು :**

ಆಶ್ಚರಿಯೇನದು ಕೂಡಲೆ ಅಲ್ಲಿಯೆ
ನೋಡುತ ನೋಡುತ ಹುಟ್ಟಿತು ಶಿರವು
ರಾಮನು ಕಡಿದನು ಅದನೂ ಕೂಡಲೆ
ಹಿಂದೆಯೆ ಚಿಗುರಿತು ಬೇರೆಯ ಶಿರವು || ೪೫೫ ||

ಅಂತೆಯೆ ಛೇದಿಸುತಿದ್ದನು ರಾಮನು
ರಾವಣ ಶಿರಗಳು ಹುಟ್ಟುತಲಿದ್ದವು
ಅಂತೆಯೆ ತರಿದನು ನೂರು ಶಿರಗಳನು
ರಾವಣ ಹಾಗೆಯೆ ಕಾದುತಲಿದ್ದನು || ೪೫೬ ||

ರಾಮನು ಆಗಲೆ ಚಿಂತಿತನಾದನು
ಏನಿದು ಅದ್ಭುತ ರಾವಣನಿರವು
ಮಾರೀಚ ಖರರ ಕೊಂದಿಹ ಶರಗಳು
ಇವುಗಳೆ ಅಲ್ಲವೆ ಏಕಿವೆ ಹೀಗೆ || ೪೫೭ ||

ಕಬಂಧ ವಿರಾಧ ಅಲ್ಲದೆ ವಾಲಿಯ
ಕೊಂದಿಹ ಶರಗಳು ಇವುಗಳೆ ಇರುವವು
ಸಪ್ತ ಸಾಲಗಳ ಛೇದಿಸಿ ಆಚೆಗೆ
ಪರ್ವತ ಸೀಳಿದ ಶರಗಳು ಇವುಗಳು || ೪೫೮ ||

ರಾವಣನೆದುರಿಗೆ ನಿಷ್ಫಲವಿರುವವೆ
ಎನ್ನುತ ಸುರಿಸಿದ ಶರಗಳ ಮಾಲೆಯ
ಹಾಗೆಯೆ ಹೊಡೆದನು ರಾವಣನೆಡೆಗೆ
ಯುದ್ಧವು ನಡೆಯಿತು ನೆಲದಲಿ ಗಗನದಿ || ೪೫೯ ||

**ಸಾರಥಿ ಮಾತಲಿಯ ಸೂಚನೆ :**

ಅಂತೆಯೆ ನಡೆಯಿತು ಎಷ್ಟೋ ದಿನಗಳು
ವಿರಾಮವಿಲ್ಲದೆ ರಾತ್ರಿಯು ಹಗಲೂ
ಆದರು ಕಾದುವರಿಬ್ಬರು ಸರಿಸಮ
ಸಾರಥಿ ಮಾತಲಿಯೆಂದನು ರಾಮಗೆ || ೪೬೦ ||

ಅಸ್ತ್ರಕೆ ಅಸ್ತ್ರವ ಬಿಡುತಲೆ ಇರುತಿಹೆ
ಇವನನು ಕೊಲ್ಲಲು ಬ್ರಹ್ಮಾಸ್ತ್ರ ಬೇಕು
ಈಗಲೆ ಇವನಿಗೆ ಮರಣದ ಸಮಯವು
ಕೂಡಲೆ ಹಿರಿದನು ಅಸ್ತ್ರವನಾಗಲೆ || ೪೬೧ ||

ಸರ್ಪದ ತೆರದಲಿ ಬುಸುಗುಟ್ಟುತಲಿ
ಇರುತಿಹ ಉರಿಯುವ ಅಸ್ತ್ರವು ಅದುವೇ
ಅಗಸ್ತ್ಯ ಋಷಿಗಳು ರಾಮಗೆ ಕೊಟ್ಟಿಹ
ಬ್ರಹ್ಮದೇವನಿಂ ಬಂದುದು ಅಮೋಘ! || ೪೬೨ ||

ಬಾಣದ ತುದಿಯಲಿ ಅಗ್ನಿಯು ಸೂರ್ಯನು
ಮಧ್ಯದಿ ನೆಲಸಿಹ ವಾಯುವು ಕೂಡ
ಹಿರಿಯುತ ಅದನು ಬ್ರಹ್ಮಾಸ್ತ್ರವನು
ಅಭಿಮಂತ್ರಣದಿಂ ತೇಜವ ತುಂಬುತ || ೪೬೩ ||

**ರಾವಣನ ಮರಣ :**

ಜಗ್ಗುತ ಹೆದೆಯನು ಬಲಗಿವಿ ವರೆಗೂ
ಬಿಟ್ಟನು ಶಕ್ತಿಯನೆಲ್ಲವ ತುಂಬುತ
ಹೋಗುತ ಅತಿಶಯ ಭೀಕರ ನಾದದಿ
ಸೀಳಿತು ರಾವಣನೆದೆಯನು ಆಗಲೆ || ೪೬೪ ||

ಹಾಗೆಯೆ ಹೋಗುತ ಭೂಮಿಯ ಸೇರುತ
ಬಂದಿತು ತಿರುಗುತ ರಾಮನ ಹತ್ತಿರ
ರಾವಣ ಬಿದ್ದನು ಅಸುವನು ನೀಗುತ
ರಕ್ಕಸರೆಲ್ಲರು ಓಡಿದರೆಲ್ಲೆಡೆ || ೪೬೫ ||

ಬೆನ್ನನು ಬಿಡದಲೆ ವಾನರರೆಲ್ಲರು
ಅಟ್ಟಿಸಿ ರಕ್ಕಸ ವೀರರ ಕೊಲ್ಲುತ
ಘೋಷಣೆ ಮಾಡುತ ರಾವಣ ಮರಣವ
ಕೊಲ್ಲುತಲಿದ್ದರು ರಕ್ಕಸರೆಲ್ಲರ || ೪೬೬ ||

ದೇವದುಂದುಭಿಯು ಮೊಳಗಿತು ಗಗನದಿ
ಹೂಮಳೆಯಾಯಿತು ರಾಮನ ಮೇಲೆ
ವಾನರ ವೀರರು ವಿಭೀಷಣ ಕೂಡ
ಬಂದರು ಅಲ್ಲಿಗೆ ವಂದನೆ ಮಾಡುತ || ೪೬೭ ||

**ವಿಭೀಷಣನ ದುಃಖ, ರಾಮನಿಂದ ಸಾಂತ್ವನ :**

ಅಸೀಮ ಸಾಹಸಿ ವೀರನು ಅಣ್ಣನು
ಮಡಿದಿಹ ಪರಿಯನು ನೋಡಿ ವಿಭೀಷಣ
ತಡೆಯದೆ ಉಕ್ಕುತ ಬಂದಿತು ದುಃಖವು
ಹಲಬುತ ಕುಳಿತನು ದೇಹದ ಬಳಿಯಲಿ || ೪೬೮ ||

ಸಾಂತ್ವನೆ ಮಾಡಲು ರಾಮನು ಅಂದನು
ಶೋಕವು ಸಲ್ಲದು ರಾವಣ ಬಗೆಗೆ
ಹೇಡಿಯ ತೆರದಲಿ ಮಡಿಯದೆ ಆತನು
ಶೂರನ ಮರಣವ ಹೊಂದಿಹ ನಿಜಕೂ ॥ ೪೭೯ ॥

**ಶ್ರೀರಾಮನಿಂದ ರಾವಣನ ಶೌರ್ಯದ ಶ್ಲಾಘನೆ :**

ಚಂಡಪರಾಕ್ರಮಿ ಸಂಗ್ರಾಮಸಿಂಹ
ಅದ್ಭುತ ಶಕ್ತಿಯ ತೋರಿಸಿ ಬೆಳಗಿದ
ಇಂತಹ ವೀರರ ಮರಣಕೆ ಎಂದೂ
ಶೋಕವು ಸಲ್ಲದು ತಿಳಿದಿರು ವೀರನೆ ॥ ೪೮೦ ॥

ನಿನ್ನಯ ಅಣ್ಣನು ಸಾಮಾನ್ಯನಿದ್ದನೆ
ಇಂದ್ರನ ಸಹಿತದಿ ಮೂರು ಲೋಕಗಳ
ನಡುಗಿಸಿ ಗುಡುಗಿದ ವೀರನು ಇದ್ದನು
ಶೋಕವು ಸಲ್ಲದು ಶಾಂತಿಯ ಹೊಂದು ॥ ೪೮೧ ॥

**ರಾವಣನ ಅಂತ್ಯಕ್ರಿಯೆಗಳನ್ನು ಮಾಡಲು ವಿಭೀಷಣನ ಬೇಡಿಕೆ :**

ಎನ್ನಲು ಅಂದನು ವಿಭೀಷಣನಾಗ
ರಾಘವ ಅಣ್ಣನು ಅಜೇಯ ವೀರನು
ಇಂದಿನ ವರೆಗೂ ಸೋಲನು ಅರಿಯನು
ಮಾಡಿದನೆಷ್ಟೋ ದಾನ ಧರ್ಮಗಳ ॥ ೪೮೨ ॥

ಗುರುಗಳ ಹಿರಿಯರ ಪೂಜಿಸಿ ಇರುವನು
ರಾಜಭೋಗಗಳ ಪಡೆದನು ಆತನು
ಸೇವಕರೆಲ್ಲರ ತೃಪ್ತಿಯ ಪಡಿಸಿಹ
ಮಿತ್ರರಿಗೋಸುಗ ಧನವನು ಕೊಟ್ಟಿಹ ॥ ೪೮೩ ॥

ವೈರಿಯು ಸೇಡನು ತೀರಿಸಿಕೊಂಡಿಹ
ಅಗ್ನಿಹೋತ್ರಾದಿ ಕಾರ್ಯವ ಮಾಡುತ
ಮಹಾತಪಸ್ವಿಯು ವೇದಾಂತಿಯು ಸಹ
ಕರ್ಮನಿಷ್ಠನಿಹ ಮಹಾಪುರುಷನೂ || ೪೭೪ ||

ನಿನ್ನಯ ಅಪ್ಪಣೆಯಾದರೆ ಈಗಲೆ
ಅಂತ್ಯೇಷ್ಠಿಯನೂ ಮಾಡುವೆ ನಾನು
ಕೇಳುತ ಈ ನುಡಿ ರಾಮನು ಎಂದನು
ಏನಿದು ಗೆಳೆಯನೆ ಕೇಳುವದೇನಿದು || ೪೭೫ ||

ಶ್ರೀರಾಮನ ಒಪ್ಪಿಗೆ :

ವೈರಕೆ ಮರಣವು ಕೊನೆಯದು ಅಲ್ಲವೆ
ವೈರವು ಹೋಯಿತು ಮರಣದ ಸಂಗಡ
ಉತ್ತರ ಕ್ರಿಯೆಯನು ಮಾಡೈ ನೀನು
ಇಂದಿಗೆ ಆತನು ಸೋದರ ನನಗೂ || ೪೭೬ ||

ತಲುಪಿತು ಮರಣದ ಸುದ್ದಿಯು ಲಂಕೆಗೆ
ಬಂದರು ರಾಣಿಯರೆಲ್ಲರು ಅಳುತಲಿ
ತಡೆಯದೆ ದುಃಖವ ಹೊರಳುತ ನೆಲದಲಿ
ರಾವಣನರಸಿಯು ಮಂಡೋದರಿ ಸಹ || ೪೭೭ ||

ರಾವಣನರಸಿಯರೆಲ್ಲರ ಶೋಕವ
ನೋಡುತ ರಾಮನು ವಿಭೀಷಣಗೆಂದ
ಶಾಂತವ ಮಾಡುತ ಕಳಿಸುತ ಅವರನು
ಉತ್ತರ ಕ್ರಿಯೆಯನು ಮಾಡೈ ನೀನು || ೪೭೮ ||

**ವಿಭೀಷಣನ ಸಂದೇಹ :**

ರಾಮನೆ ರಾವಣ ಧರ್ಮವ ಲಂಘಿಸಿ
ಕ್ರೂರ ರೀತಿಯಲಿ ಘಾತುಕನಾದನು
ಅನೃತವಾದಿಯು ಪರಸತಿ ಮೋಹಕ
ಅಣ್ಣನು ಇದ್ದರು ಶತ್ರುವು ಆದನು ॥ ೪೭೯ ॥

ದುರ್ಗುಣ ತುಂಬಿದ ಅಣ್ಣಗೆ ನಾನು
ಸಂಸ್ಕಾರವನ್ನು ಮಾಡುವದೊಳಿತೆ
ಕಾರಣ ನಾನೂ ಮಾಡುವದಿಲ್ಲವು
ಎನ್ನಲು ಅಂದನು ರಾಮನು ಅವನಿಗೆ ॥ ೪೮೦ ॥

**ಶ್ರೀರಾಮನ ಉತ್ತರ :**

ನಿನ್ನಯ ಸಾಹಸದಿಂದಲಿ ಎನಗೆ
ಲಭಿಸಿದೆ ವಿಜಯವು ನಿಶ್ಚಿತ ತಿಳಿ ನೀ
ಕಾರಣ ನಿನಗೇ ಹಿತವಿಹ ಕಾರ್ಯವ
ಹೇಳುವದೆನ್ನಯ ಪಾಲಿಗೆ ಬಂದಿದೆ ॥ ೪೮೧ ॥

ಅಧರ್ಮ ಅನೃತ ಇದ್ದರು ಕೂಡಾ
ರಾವಣ ತೇಜಸಿ ಬಲಾಢ್ಯ ಶೂರ
ಬಲಯುತ ಮಹಿಮೆಯ ಹೊಂದಿದ ವೀರನು
ವೈರಗಳೆಲ್ಲಕು ಮರಣವೆ ಕೊನೆಯು ॥ ೪೮೨ ॥

ಹೇಳಿದೆನಾಗಲೆ ರಾವಣ ಸೋದರ
ನಿನಗೂ ನನಗೂ ಇಂದಿನ ದಿನದಿಂ
ಉತ್ತರ ಕ್ರಿಯೆಯನು ಮಾಡೈ ಈಗಲೆ
ಅಂತೆಯೆ ನಡೆಯಿತು ಉತ್ತರ ಕ್ರಿಯೆಯು ॥ ೪೮೩ ॥

ನಂತರ ನಮಿಸುತ ವಿಭೀಷಣನಾಗ
ಹೇಳಿದ ರಾವಣನರಸಿಯರಿಗೆ ಆವ
ಹೋಗಿರಿ ಭವನಕೆ ಶಾಂತಿಯ ಹೊಂದುತ
ಆದುದು ಆಯಿತು ಮಾಡುವದೇನಿದೆ ॥ ೪೮೪ ॥

ರಾಣಿಯರೆಲ್ಲರು ಹೋದರು ಲಂಕೆಗೆ
ವಿಭೀಷಣ ಬಂದ ರಾಮನ ಕಡೆಗೆ
ಅಲ್ಲಿಯೆ ಇದ್ದರು ಕಪಿವರರೆಲ್ಲರು
ಯುದ್ಧದ ವಿಷಯವ ಚರ್ಚೆಯ ಮಾಡುತ ॥ ೪೮೫ ॥

ರಾಮನು ಕಳಿಸಿದ ಇಂದ್ರನ ರಥವನು
ಗೌರವ ಮಾಡುತ ಮಾತಲಿಯನ್ನು
ನಂತರ ಅಪ್ಪಿದ ಸುಗ್ರೀವನನ್ನು
ಕೂಡಿದರೆಲ್ಲರು ಶಿಬಿರದಿ ತ್ವರಿತದಿ ॥ ೪೮೬ ॥

**ವಿಭೀಷಣನಿಗೆ ಪಟ್ಟಕಟ್ಟಲು ಲಕ್ಷ್ಮಣನಿಗೆ ಆಜ್ಞೆ :**

ರಾಮನು ಅಂದನು ಅನುಜನ ಕರೆಯುತ
ಲಕ್ಷ್ಮಣ ಈಗಲೆ ಹೋಗುತ ಲಂಕೆಗೆ
ಪಟ್ಟವ ಕಟ್ಟಲು ವಿಭೀಷಣವರಗೆ
ಆಗಲಿ ಆತನು ಕೂಡಲೆ ರಾಜನು ॥ ೪೮೭ ॥

ಸಂತಸದಿಂದಲಿ ಲಕ್ಷ್ಮಣನಾಗಲೆ
ಕಳಿಸಿದ ವಾನರ ವೀರರ ಎಲ್ಲೆಡೆ
ಕೊಡುತಲಿ ಸುವರ್ಣ ಕಲಶವ ಅವರಿಗೆ
ಸಾಗರ ಜಲವನು ತರಲಿಕೆ ಹೇಳಿದ ॥ ೪೮೮ ॥

ಮನಸಿನ ವೇಗದಿ ಹೋಗುವ ಕಪಿಗಳು
ತಂದರು ಜಲವನು ಕೂಡಲೆ ಅಲ್ಲಿಗೆ
ಲಂಕೆಗೆ ಹೋಗುತ ಎಲ್ಲರು ಆಗಲೆ
ಪಟ್ಟವ ಏರಿದ ವಿಭೀಷಣನಾಗ ॥ ೪೮೯ ॥

**ವಿಭೀಷಣನ ಪಟ್ಟಾಭಿಷೇಕ :**

ಲಕ್ಷ್ಮಣ ತಾನೇ ಸುವರ್ಣ ಕಲಶದಿ
ಜಲವನು ಪಡೆಯುತ ಅಭಿಷೇಕಗೈದ
ವೇದದ ರೀತಿಯ ವಿಧಿಪೂರ್ವಕದಲಿ
ವಾನರ ರಕ್ಕಸರೆಲ್ಲರ ಎದುರಲಿ ॥ ೪೯೦ ॥

ಸಂತಸದಿಂದಲಿ ರಕ್ಕಸರೆಲ್ಲರು
ಮಣಿದರು ಅವನಿಗೆ ಆದರದಿಂದಲಿ
ವಿಭೀಷಣನಾಗ ಸಚಿವರ ಸಹಿತದಿ
ಹೊರಟನು ರಾಮನ ಕಾಣಲು ಮತ್ತೆ ॥ ೪೯೧ ॥

ರಾಮನ ಕಾಣುತ ನಮಿಸುತ ಅವನಿಗೆ
ಕಾಣಿಕೆ ಕೊಟ್ಟನು ಹೇರಳವಾಗಿಯೆ
ಸಂತಸದಿಂದಲಿ ಪಡೆಯುತ ರಾಮನು
ಕರೆಯುತ ಹನುಮನ ಹೇಳಿದನಿಂತು ॥ ೪೯೨ ॥

**ಶ್ರೀರಾಮನಿಂದ ಸೀತೆಗೆ ಸಂದೇಶ :**

ವತ್ಸನೆ ಮಾರುತಿ ರಕ್ಕಸ ರಾಜನ
ಅಪ್ಪಣೆ ಪಡೆಯುತ ಲಂಕೆಗೆ ಹೋಗು
ಕ್ರಮವನು ಅರಿಯುತ ಅಶೋಕವನಕೆ
ಹೋಗುತ ಸೀತೆಗೆ ಸುದ್ದಿಯ ತಿಳಿಸು ॥ ೪೯೩ ॥

ಯುದ್ಧದಿ ಗೆದ್ದಿಹ ಸುದ್ದಿಯ ತಿಳಿಸುತ
ನಾನೂ ಅನುಜನು ಕುಶಲದಿ ಇರುವದು
ಹೇಳುತ ತಿಳಿಸೈ ರಾವಣ ವಧೆಯನು
ತಿಳಿಸೈ ಸೀತೆಯ ಸಂದೇಶ ಎನಗೆ ॥ ೪೯೪ ॥

ರಾಮನ ಆಣತಿ ಹೊಂದುತ ಮಾರುತಿ
ಹೊಕ್ಕನು ಲಂಕಾನಗರವ ಕೂಡಲೆ
ಹೊಂದುತ ಗೌರವ ರಕ್ಕಸರಿಂದಲಿ
ತಲುಪಿದನಾಗಲೆ ಅಶೋಕವನವನು ॥ ೪೯೫ ॥

ಸ್ನಾನವು ಇಲ್ಲದೆ ಪಾನವು ಇಲ್ಲದೆ
ಖಿನ್ನಳು ಆಗಿಹ ಸೀತೆಯ ಕಾಣುತ
ಹನುಮನು ಹೇಳುತ ತನ್ನಯ ಹೆಸರನು
ನಿಂತನು ನಮಿಸುತ ನಿಶ್ಚಲನಾಗಿಯೆ ॥ ೪೯೬ ॥

ನೆನೆಸುತ ಹನುಮನ ಸಾಹಸ ಕಾರ್ಯವ
ಸಂತಸಪಟ್ಟಳು ಅರಳಿತು ವದನವು
ರಾಮನ ದೂತನೆ ಕುಶಲವೆ ಎಲ್ಲವು
ಎನ್ನಲು ಮಾರುತಿ ಅಂದನು ಈ ತೆರ ॥ ೪೯೭ ॥

ದೇವಿಯೆ ರಾಮನು ಕುಶಲನು ಇರುವನು
ಕುಶಲರು ಲಕ್ಷ್ಮಣ ಸುಗ್ರೀವರು ಸಹ
ರಾಮನು ಕೊಲ್ಲುತ ರಾವಣ ರಾಜನ
ಯುದ್ಧದಿ ಜಯವನು ಪಡೆದಿಹನಾಗಲೆ ॥ ೪೯೮ ॥

ಕಳಿಸಿಹ ನಿಮಗೀ ಸಂತಸ ಸುದ್ದಿಯ
ಹೇಳಲು ಕಳಿಸಿಹ ಈ ಪರಿ ನಿಮಗೆ
ಯುದ್ಧದಿ ಜಯವನು ಪಡೆದಿಹೆ ನಾನು
ಚಿಂತೆಯು ಹರಿಯಿತು ನಿನ್ನದು ಇನ್ನು || ೪೯೯ ||

ಯುದ್ಧದಿ ರಾವಣ ಸಾವನು ಅಪ್ಪಿದ
ವಿಭೀಷಣನೀಗ ಲಂಕೆಯ ಅಧಿಪತಿ
ಈಗಲೆ ಬರುವನು ನಿನ್ನನು ಕಾಣಲು
ಚಿಂತೆಯ ಬಿಡುತಲಿ ಸಂತಸದಿಂದಿರು || ೫೦೦ ||

ಎನ್ನುತ ರಾಮನು ಹೇಳಿಕೆ ಕಳಿಸಿಹ
ಎನ್ನಲು ಹನುಮನು ಸೀತೆಯ ಮನದಲಿ
ಉಕ್ಕಿತು ಸಂತಸ ಕಂಬನಿ ತುಂಬಿತು
ಕಂಠವು ಬಿಗಿಯಿತು ಹರ್ಷದ ಹೊನಲಲಿ || ೫೦೧ ||

ನಾಲಿಗೆ ಏಳದು ಮಾತೂ ಹೊರಡದು
ನಿಂತಳು ಏನೂ ಮಾತನು ಆಡದೆ
ಕಪಿವರ ಮಾರುತಿ ಅಂದನು ಸೀತೆಗೆ
ದೇವಿಯೆ ಏನೂ ಹೇಳುವದಿಲ್ಲವೆ ? || ೫೦೨ ||

ಜಾನಕಿಯೆಂದಳು ಗದ್ಗದ ಕಂಠದಿ
ವಾನರ ವೀರನೆ ರಾಮನ ಜಯವನು
ಕೇಳುತ ಆದೆನು ಪರವಶ ನಾನು
ಸಂತಸಭರದಲಿ ತಿಳಿಯದು ಒಂದೂ || ೫೦೩ ||

ಇಂತಿಹ ಸಂತಸ ಸುದ್ದಿಯ ತಂದಿಹ
ನಿನ್ನಯ ಗೌರವ ಪಡಿಸಲು ಎನ್ನಲಿ
ಅಂತಹ ಉತ್ತಮ ವಸ್ತುವೆ ಇಲ್ಲವು
ನಿನ್ನಯ ಕಾರ್ಯಕೆ ಕಾಣಿಕೆ ಇಲ್ಲವು || ೫೦೪ ||

ಚಿನ್ನವು ಬೆಳ್ಳಿಯು ರತ್ನರಾಶಿಯೂ
ನಿನ್ನಯ ಕಾರ್ಯಕೆ ಸಾಟಿಯು ಅಲ್ಲವು
ಎನ್ನುತ ಮಿಡುಕಲು ಮಾರುತಿಯೆಂದನು
ತಾಯಿಯೆ ನಿನ್ನಯ ಹಿತವಹ ಮಾತೇ || ೫೦೫ ||

ಮಿಕ್ಕಿದೆ ಎಲ್ಲವು ಕಾಣಿಕೆಗಳನು
ತಾಯಿಯೆ ಅಪ್ಪಣೆ ಕೊಟ್ಟರೆ ಈಗಲೆ
ನಿನ್ನಯ ಸುತ್ತಲು ಕಾಯುವ ರಕ್ಕಸಿ
ಎಲ್ಲರ ಕೊಲ್ಲುವ ಮನಸಿದೆ ಎನಗೆ || ೫೦೬ ||

ಒಂದೇ ಸಮನೆ ನಿನ್ನನು ಕಾಡುತ
ಪೀಡಿಸುತಿದ್ದಿಹ ಇವರನು ಈಗಲೆ
ಎನ್ನಲು ಜಾನಕಿ ಅಂದಳು ಹನುಮಗೆ
ಒಡೆಯನ ಅಪ್ಪಣೆ ಪಾಲಿಸಲೆಂದೇ || ೫೦೭ ||

ಕೊಡುತಲಿ ಇದ್ದರು ಕಿರುಕುಳವನ್ನು
ಒಡೆಯನ ಮರಣದ ನಂತರ ಇವರು
ಹಿಂಸಿಸಲಾರರು ಎಂದಿಗು ನನ್ನನು
ಪೂರ್ವದ ಕರ್ಮದ ಫಲವನು ಉಂಡೆನು || ೫೦೮ ||

ಮಾರುತಿಯೆಂದನು ತಾಯಿಯೆ ಹೇಳಿರಿ
ರಾಮಗೆ ತಿಳಿಸಲು ಸಂದೇಶವಿದೆಯೆ
ಅಂದಳು ಜಾನಕಿ ವಾನರಶ್ರೇಷ್ಠನೆ
ತಿಳಿಸೈ ರಾಮನ ನೋಡಲು ಇಚ್ಛಿಪೆ ॥ ೫೦೯ ॥

ಎನ್ನುತ ಇಷ್ಟೇ ಹೇಳಿದಳಾಗಲೆ
ಕಾಣುವೆ ತಾಯಿಯೆ ರಾಮನ ಕೂಡಲೆ
ಲಕ್ಷ್ಮಣ ಸಹಿತದಿ ವಿಜಯೀ ರಾಮನ
ಎನ್ನುತ ರಾಮನ ಶಿಬಿರಕೆ ಬಂದನು ॥ ೫೧೦ ॥

**ಹನುಮಂತನಿಂದ ಸೀತೆಯ ಸುದ್ದಿ :**

ಹನುಮನು ಅಂದನು ನಮಿಸುತ ರಾಮಗೆ
ಶೋಕದಿ ಬಳಲಿಹ ದುಃಖದಿ ಮುಳುಗಿಹ
ಜಾನಕಿ ದೇವಿಯು ವಿಜಯದ ಸುದ್ದಿಯ
ಕೇಳುತ ಆದಳು ಸಂತಸಪರವಶ ॥ ೫೧೧ ॥

ವಿಜಯವ ಪಡೆದಿಹ ಶ್ರೀರಾಮನನ್ನು
ಕಾಣಲು ಇಚ್ಛಿಪೆ ಲಕ್ಷ್ಮಣ ಸಹಿತದಿ
ಎನ್ನುತ ಜಾನಕಿ ತಿಳಿಸಿದಳೆನಗೆ
ಎನ್ನಲು ರಾಮನು ಬಿಟ್ಟನು ಉಸಿರನು ॥ ೫೧೨ ॥

**ಶ್ರೀರಾಮನಿಂದ ವಿಭೀಷಣನಿಗೆ ಆಜ್ಞೆ :**

ನೆಲವನು ನೋಡುತ ಕರೆದನು ಆಗಲೆ
ವಿಭೀಷಣ ದೊರೆಯೇ ನೀನೇ ಹೋಗುತ್ತ
ಸೀತೆಗೆ ಮಂಗಳಸ್ನಾನವ ಮಾಡಿಸಿ
ದಿವ್ಯಾಂಗರಾಗ ಲೇಪಿಸಿ ಕೂಡಾ ॥ ೫೧೩ ॥

ಒಳ್ಳೆಯ ಬಟ್ಟೆಯ ಉಡಿಸುತ ಅವಳಿಗೆ
ಒಡವೆಯ ಧರಿಸಿಹ ಅವಳನು ಕಳುಹಿಸು
ತಡವನು ಮಾಡದೆ ಬೇಗನೆ ಕಳುಹಿಸು
ಎನ್ನುತ ಕಳಿಸಿದ ವಿಭೀಷಣನನ್ನು || ೫೧೪ ||

ಕೂಡಲೆ ಹೋಗುತ ಲಂಕೆಯ ರಾಜನು
ತನ್ನಯ ಸ್ತ್ರೀಯರ ಕಳಿಸಿದನಾಗಲೆ
ರಾಮನ ಆಣತಿ ತಿಳಿಸುತ ಸೀತೆಗೆ
ಸ್ನಾನವ ಮಾಡುತ ಲೇಪನದೊಂದಿಗೆ || ೫೧೫ ||

ದಿವ್ಯಾಭರಣವ ಧರಿಸುತ ಬರಲು
ಅಂತೆಯೆ ತಿಳಿಸಿದರಾಗಲೆ ಅವರು
ನಿಂತಿದೆ ಏರಲು ಪಲ್ಲಕ್ಕಿ ಕೂಡಾ
ಸೀತೆಯು ಅಂದಳು ರಾಕ್ಷಸೇಂದ್ರನೆ || ೫೧೬ ||

ಸೀತೆಯ ಪ್ರತಿಕ್ರಿಯೆ :

ಸ್ನಾನವ ಮಾಡುವ ಕಾರಣವೇನಿದೆ
ಇಂತಹ ಸ್ಥಿತಿಯಲಿ ನೋಡುವೆ ರಾಮನ
ಎಂತಹ ಸ್ಥಿತಿಯಲಿ ಇದ್ದೆನೊ ಇಲ್ಲಿಯೆ
ಅಂತಹ ಸ್ಥಿತಿಯನು ನೋಡಲಿ ಆತನು || ೫೧೭ ||

ಲಂಕೆಯ ಒಡೆಯನು ಅಂದನು ಆಗಲೆ
ರಾಮನ ಆಣತಿ ಇರುವದು ಆ ಪರಿ
ಹಾಗೆಯೆ ಮಾಡಲು ಯುಕ್ತವು ಅಲ್ಲವೆ
ಒಪ್ಪಿದಳಾಗಲೆ ಸೀತೆಯು ಮಾತಿಗೆ || ೫೧೮ ||

ಆಣತಿಯಂತೆಯೆ ಸ್ನಾನವ ಮಾಡುತ
ಮಡಿಯನು ಉಡುತಲಿ ಒಡವೆಯ ತೊಡುತಲಿ
ಪಾಲಕಿಯಲ್ಲಿಯೆ ಬಂದಳು ಜಾನಕಿ
ವಿಭೀಷಣನಾಗ ಬಂದುದು ತಿಳಿಸಿದ ॥ ೫೧೯ ॥

**ಸೀತೆಯನ್ನು ನೋಡಿ ರಾಮನ ಪ್ರತಿಕ್ರಿಯೆ :**

ರಕ್ಕಸ ಬಳಿಯಲಿ ಬಹುದಿನವಿದ್ದಿಹ
ಸೀತೆಯು ಬಂದಳು ಎನ್ನುತ ಕೇಳುತ
ಹರ್ಷವು ಮರುಕವು ರೋಷವು ಒಮ್ಮೆಲೆ
ಚಿಮ್ಮುತ ಬಂದವು ರಾಮನ ಹೃದಯದಿ ॥ ೫೨೦ ॥

ತನ್ನಲಿ ತಾನೇ ಯೋಚನೆ ಮಾಡುತ
ರಾಮನು ಕರೆದನು ವಿಭೀಷಣನನ್ನು
ಕೂಡಲೆ ಕಳುಹಿಸು ವೈದೇಹಿಯನ್ನು
ಎದುರಿಗೆ ಬಂದರೆ ನೋಡುವೆ ಅವಳನು ॥ ೫೨೧ ॥

ಸುತ್ತಲು ಮುತ್ತಲು ಇದ್ದರು ಕಪಿಗಳು
ಅಲ್ಲದೆ ಕರಡಿಯ ಪಡೆಯೂ ಇದ್ದಿತು
ಸೀತೆಯ ಪಾಲಕಿ ಮುಂದಕೆ ಸಾಗಲು
ಕಪಿಗಳ ಹಿಂದಕೆ ಸರಿಸುತಲಿದ್ದರು ॥ ೫೨೨ ॥

ಒತ್ತಡದಿಂದಲಿ ಹಿಂದಕೆ ಸರಿಸುತ
ಭಟರದು ದಾರಿಯ ಮಾಡುತಲಿದ್ದರು
ಆಗಲೆ ಎದ್ದಿತು ಗದ್ದಲ ಹೆಚ್ಚಿಗೆ
ನೋಡುತ ರಾಮನು ಕುಪಿತನು ಆದನು ॥ ೫೨೩ ॥

ಏನಿದು ಭಟರಿಗೆ ತೊಂದರೆ ಏತಕೆ
ಯೋಧರು ಎಲ್ಲರು ಎನ್ನಯ ಬಳಗವು
ಹೆಣ್ಣಿನ ನಡತೆಯೆ ಅವಳಿಗೆ ಹೊದಿಕೆಯು
ಇಂತಹ ರಾಣಿಗೆ ಗೌರವ ಸಲ್ಲದು ॥ ೫೨೪ ॥

ಮನೆಗಳೆ ಆಗಲಿ ಮಡಿಗಳೆ ಆಗಲಿ
ಸುತ್ತಲು ಇರುತಿಹ ಕೋಟೆಗಳಾಗಲಿ
ಹೊದ್ದಿಹ ಹೊದಿಕೆಯು ಗೌರವ ಉಳಿಸವು
ದುಃಖದ ಕಾಲದಿ ಸಂಕಟ ಸಮಯದಿ ॥ ೫೨೫ ॥

ಯುದ್ಧದ ಸಮಯದಿ ರಣಭೂಮಿಯಲಿ
ಅಲ್ಲದೆ ಮದುವೆಯ ಸಮಯದಿ ಕೂಡಾ
ಮಹಿಳೆಯು ಪುರುಷರ ಕಣ್ಣಿಗೆ ಬಿದ್ದರೆ
ಆದರಲಿ ಏನೂ ದೋಷವು ಇಲ್ಲವು ॥ ೫೨೬ ॥

ಸೀತೆಯು ಇರುವದು ರಣದಲಿ ಈಗಲೆ
ಅಲ್ಲದೆ ಇರುವಳು ಸಂಕಟ ಸಮಯದಿ
ಆದರು ಎನ್ನಯ ಎದುರಲಿ ಅವಳನು
ಅನ್ಯರು ನೋಡಲು ದೋಷವು ಇಲ್ಲವು ॥ ೫೨೭ ॥

ಕಾರಣ ಕರೆಯುತ ಸೀತೆಯ ಇಲ್ಲಿಗೆ
ನಿಲ್ಲಲಿ ಇಲ್ಲಿಯೆ ಎನ್ನಯ ಎದುರಲಿ
ವಿಭೀಷಣನಾಗ ಚಿಂತಿತನಾದನು
ರಾಮನ ಮನದಲಿ ನಡೆದುದು ಏನು ? ॥ ೫೨೮ ॥

ಶ್ರೀರಾಮನ ಕಠೋರ ನಡತೆ :

ಮಾತಿನ ರೀತಿಯ ಕೇಳುತ ಹನುಮನು
ಲಕ್ಷ್ಮಣ ಕೂಡಾ ದುಃಖಿತರಾದರು
ರಾಮನ ದಾರುಣ ಮುಖವನು ನೋಡುತ
ನಡುಗಿದರಾಗಲೆ ಸೀತೆಯ ನೆನೆಯುತ || ೫೨೯ ||

ವಿಭೀಷಣನ ಜೊತೆ ಬಂದಳು ಜಾನಕಿ
ಲಜ್ಜೆಯ ಕಾರಣ ಮುದುರಿದ ಆಕೆಯು
ಮುಖವನು ಮುಚ್ಚುತ ಸೆರಗಿನ ತುದಿಯಿಂ
ಆರ್ಯನೆ ಎನ್ನುತ ಅತ್ತಳು ಗಳಗಳ || ೫೩೦ ||

ಹಾಗೆಯೆ ಮುಖವನು ಎತ್ತುತ ಒಮ್ಮೆಯೆ
ನೋಡುತ ರಾಮನ ಮುಖವನು ಮೆಲ್ಲನೆ
ಮನದಲಿ ತುಂಬಿತು ಹರ್ಷವು ಮತ್ತೆ
ಕಠಿಣತೆ ನೋಡುತ ಅದುರಿತು ಹೃದಯವು || ೫೩೧ ||

ಶ್ರೀರಾಮನ ಕಠೋರ ವಾಣಿ :

ರಾಮನು ಹೇಳಿದ ಗಭೀರ ಸ್ವರದಲಿ
ಭದ್ರೆಯೆ ಯುದ್ಧದಿ ವೈರಿಯ ಕೊಲ್ಲುತ
ನಿನ್ನನು ಪಡೆದೆನು ಜಗವದು ತಿಳಿಯಲಿ
ಪೌರುಷ ಮೆರೆಸುತ ಸಾಧಿಸಿದೆಲ್ಲವ || ೫೩೨ ||

ಸೇಡನು ತೀರಿಸಿ ಪ್ರತಿಜ್ಞೆ ಮುಗಿಸಿದೆ
ಕಾರಣ ಇಂದಿಗೆ ಸ್ವತಂತ್ರನಾಗಿಹೆ
ವೈರಿಯು ನಿನ್ನನು ಒಯ್ದುದು ಕಾರಣ
ದೈವದಿ ಆಗಿಹ ಅಪಮಾನವನ್ನು || ೫೩೩ ||

ಪೌರುಷದಿಂದಲಿ ತೊಡೆದಿಹೆನದನು
ಹನುಮನ ಸಾಗರಲಂಘನ ಅಲ್ಲದೆ
ಲಂಕಾಮರ್ದನ ಸಫಲವು ಆದವು
ವಿಭೀಷಣನೀಗ ರಾಜನು ಆಗಿಹ || ೫೩೪ ||

ಕೇಳುತ ಈ ನುಡಿ ಜಾನಕಿ ಅಳುತಲಿ
ಬೆದರಿದ ಚಿಗರಿಯ ತೆರದಲಿ ನೋಡುವ
ಸೀತೆಯ ಕಾಣುತ ರಾಮನ ತಾಳ್ಮೆಯು
ತಪ್ಪುತ ಕೋಪವು ಹೆಚ್ಚಿತು ಇನ್ನೂ || ೫೩೫ ||

ಉರಿಯುವ ಬೆಂಕಿಗೆ ತುಪ್ಪವು ಬಿದ್ದರೆ
ಆಗುವ ತೆರದಲಿ ಕೋಪವು ಉರಿಯಿತು
ಹುಬ್ಬು ಗಂಟನು ಮಾಡುತ ರಾಮನು
ಓರೆಯ ಕಣ್ಣಿಂ ಸೀತೆಯ ನೋಡುತ || ೫೩೬ ||

ನುಡಿದನು ರಾಮನು ಕಠೋರ ನುಡಿಯನು
ಸೀತೆಯೆ ಆಲಿಸು ಅಪಮಾನಕಾಗಿ
ಶಕ್ಯವು ಇದ್ದಿಹ ಸೇಡನು ತೀರಿಸಿ
ಕೊಂದೆನು ದುರ್ಜಯ ವೈರಿಯ ನಾನು || ೫೩೭ ||

ಎನ್ನಯ ಶ್ರಮಕೆ ಗೆಳೆಯರ ಬೆಂಬಲ
ಆದರೆ ತಿಳಿದಿರು ಆದುದು ಎಲ್ಲವು
ನಿನಗಾಗಿಯಲ್ಲ ಆಲಿಸು ನೆಟ್ಟಗೆ
ಎನ್ನಯ ವಂಶದ ಗೌರವಕಾಗಿಯೆ || ೫೩೮ ||

ಪರಮನೆಯಲ್ಲಿಯೆ ಇದ್ದುದ ಕಾರಣ
ನಿನ್ನಯ ಚರಿತದಿ ಸಂಶಯವಾಗಿದೆ
ಆಗಿಹೆ ಸೀತೆಯೆ ಕಣ್ಣಿಗೆ ನೋವು
ಎನ್ನಯ ಕಣ್ಣನು ಕೊರೆಯುವೆ ಚುಚ್ಚುವೆ ॥ ೫೩೯ ॥

ಜನಕಜೆ ಹೋಗೆಲೆ ಇಚ್ಛೆಯು ಬಂದೆಡೆ
ಅಪ್ಪಣೆ ಕೊಟ್ಟಿಹೆ ಹೋಗೆಲೆ ನಿಜಕೂ
ಉತ್ತಮ ಕುಲದಲಿ ಜನಿಸಿದ ಆರ್ಯನು
ಪರಮನೆ ವಾಸವ ಮಾಡಿದ ಸತಿಯನು ॥ ೫೪೦ ॥

ಯಾವನು ಹೊಂದುವ ತಿಳಿಸೆಲೆ ಮತ್ತೆ
ರಾವಣ ಮನೆಯಲಿ ಇದ್ದಿಹ ನಿನ್ನನು
ರಾವಣ ಮಡಿಲಲಿ ಆಡಿದ ನಿನ್ನನು
ಉನ್ನತ ವಂಶದಿ ಹುಟ್ಟಿದ ನಾನು ॥ ೫೪೧ ॥

ಹೊಂದುವದೆಂತದು ಹೇಳೆಲೆ ನೀನು
ಜೀವನಕಾಗಿಯೆ ಆಶ್ರಯ ಹೊಂದು
ಲಕ್ಷ್ಮಣ ಭರತನ ಸುಗ್ರೀವನೆಡೆಗೆ
ಇಲ್ಲವೆ ಇರು ನೀ ವಿಭೀಷಣನೆಡೆಗೆ ॥ ೫೪೨ ॥

ನಿನ್ನಯ ಸುಂದರ ರೂಪವ ನೋಡುತ
ಕಾಮುಕ ರಾವಣ ಸುಮ್ಮನೆ ಇರುವನೆ
ನಲ್ಮೆಯ ನುಡಿಯನು ಕೇಳಲು ಇಚ್ಛಿಪ
ಸೀತೆಯು ಕುಸಿದಳು ಗಡಗಡ ನಡುಗುತ ॥ ೫೪೩ ॥

**ಸೀತೆಯ ಉತ್ತರ :**

ಬಿಕ್ಕುತ ಕಂಬನಿ ತುಂಬಿದ ಸೀತೆಯು
ಏಕಿದು ನಾಥನೆ ಇಂತಹ ಮಾತಿದು
ಆಡಲು ಬಾರದ ಮಾತುಗಳೇತಕೆ
ಸುಸಂಸ್ಕೃತ ಜನರು ಆಡುವ ಮಾತೇ ॥ ೫೪೪ ॥

ಎನ್ನಯ ಚಿಂತೆಯ ಆಣೆಯ ಮಾಡುತ
ಹೇಳುವೆ ಕೇಳೈ ಶುದ್ಧಳು ನಾನಿಹೆ
ಎನ್ನನು ನಂಬಿರಿ ಶುದ್ಧಳು ಆಗಿಹೆ
ಬಲಯುತವಾಗಿಯೆ ಎನ್ನನು ಒಯ್ದರೆ ॥ ೫೪೫ ॥

ಎನ್ನಯ ತಪ್ಪೇ ಹೇಳಿರಿ ನೀವು
ಕಾಯಾ ವಾಚಾ ಮನಸಾ ಕೂಡಾ
ನಿಮ್ಮನು ಬಿಡುತಲಿ ಅನ್ಯರ ಚಿಂತಿಸೆ
ಇರುವೆವು ಇಬ್ಬರು ಒಡನಾಡಿಗಳೂ ॥ ೫೪೬ ॥

ಎನ್ನಯ ಮಾನದ ರಕ್ಷಣೆ ನಿನ್ನದು
ಇಂದಿನ ವರೆಗೂ ಸಂಗಡ ಇದ್ದರು
ಎನ್ನಯ ಶೀಲವ ಶಂಕಿಸುತಿಹೆಯಾ ?
ಆಯಿತು ಎನ್ನಯ ಜೀವನ ಮುಗಿಯಿತು ॥ ೫೪೭ ॥

ಬಲಯುತ ಹನುಮನ ಕಳಿಸಿದೆಯಲ್ಲವೆ
ಆಗಲೆ ಎನ್ನನು ತ್ಯಜಿಸಿದರಾದರೆ
ಹನುಮನ ಎದುರಿಗೆ ಪ್ರಾಣವನೀಗುತ
ಯುದ್ಧದ ತೊಂದರೆ ಕಳೆಯುತಲಿದ್ದೆನು ॥ ೫೪೮ ॥

ಆಲ್ಪರ ತೆರದಲಿ ಕೋಪದ ಕೈಯಲಿ
ಬುದ್ಧಿಯ ಕೊಡುತಲಿ ಅನ್ನುತಲಿರುತಿಹೆ
ಹೆಂಗಸರೆಲ್ಲರು ಚಪಲರು ಎನ್ನುವ
ಮಾತನೆ ನಂಬುತ ಅನ್ನುತಲಿರುತಿಹೆ ॥ ೫೪೯ ॥

ಜನಕನ ಕುವರಿಯು ಭೂಮಿಯ ಪುತ್ರಿಯು
ಎನ್ನುವದನ್ನೂ ಮರೆತಿಹೆ ಜೀಯಾ
ಎನ್ನಯ ಶೀಲವ ಬಲ್ಲವನಾದರು
ಯೋಚಿಸದಿರುವೆಯಾ ಅವುಗಳ ಈಗ ॥ ೫೫೦ ॥

**ಚಿತೆಯನ್ನು ನಿರ್ಮಿಸಲು ಲಕ್ಷ್ಮಣನಿಗೆ ಸೀತೆಯ ಆಜ್ಞೆ :**

ಬಿಕ್ಕುವ ಸೀತೆಯು ಅಳುತಲೆ ಇದ್ದರು
ರಾಮನು ನೋಡನು ಸೀತೆಯ ಕಡೆಗೆ
ಸೀತೆಯು ನೋಡುತ ಲಕ್ಷ್ಮಣನೆಡೆಗೆ
ಅಂದಳು ಅವನಿಗೆ ಚಿತೆಯನು ಮಾಡಲು ॥ ೫೫೧ ॥

ಎನ್ನಯ ಚಿಂತೆಗೆ ಚಿತೆಯೇ ಔಷಧ
ಗಂಡನ ಬಾಯಿಂ ಬಂದಿಹ ಮಾತನು
ಧರಿಸುತ ಎಂದಿಗು ಬದುಕೆನು ನಾನು
ಎಲ್ಲರ ಎದುರಿಗೆ ತ್ಯಜಿಸಿದ ಎನಗೆ ॥ ೫೫೨ ॥

ಅಗ್ನಿಯು ಒಂದೇ ಆಶ್ರಯಸ್ಥಾನವು
ಲಕ್ಷ್ಮಣ ನೋಡಿದ ರಾಮನ ಕಡೆಗೆ
ಬಾರದು ಏನೂ ಸಂಕೇತವಾಗ
ಚಿತೆಯನು ನಿರ್ಮಿಸಿ ನಮಿಸಿದ ಸೀತೆಗೆ ॥ ೫೫೩ ॥

ರಾಮನು ನಿಂತಿಹ ತಲೆಯನು ತಗ್ಗಿಸಿ
ಜಾನಕಿ ಅವನಿಗೆ ಪ್ರದಕ್ಷಿಣೆ ಮಾಡಿ
ವಂದಿಸಿ ಪಾದವ ಮುಟ್ಟುತ ಅವನದು
ಬಂದಳು ಉರಿಯುವ ಅಗ್ನಿಯ ಬಳಿಯಲಿ || ೫೫೪ ||

ಮನದಲಿ ನೆನೆದಳು ದೇವತೆಗಳನೂ
ಅಲ್ಲದೆ ನೆನೆದಳು ಬ್ರಾಹ್ಮಣರನ್ನೂ
ಕೈಗಳ ಜೋಡಿಸಿ ಅಂದಳು ಅಗ್ನಿಗೆ
ಎಲ್ಲರು ಕೇಳುವ ತೆರದಲಿ ಆಗಲೆ || ೫೫೫ ||

ಎನ್ನಯ ಹೃದಯವು ಪತಿಯನು ನೆನೆಯುತ
ಸದಾಕಾಲವೂ ಇದ್ದಿಹುದಾದರೆ
ಶುದ್ಧ ಚರಿತಳು ಇದ್ದುದು ಆದರೆ
ಅಗ್ನಿಯೆ ಎನ್ನನು ರಕ್ಷಿಸು ನೀನು || ೫೫೬ ||

ಮನದಲಿ ಮಾತಲಿ ರಾಮನ ವಚನವ
ತಪ್ಪದೆ ನಡೆದುದು ಆದರೆ ಅಗ್ನಿಯೆ
ಸೂರ್ಯನು ವಾಯುವು ಚಂದ್ರನು ಭೂಮಿಯು
ಶುದ್ಧಳು ಎನ್ನುವ ನಂಬಿಕೆ ಇದ್ದರೆ || ೫೫೭ ||

**ಸೀತೆಯ ಅಗ್ನಿಪ್ರವೇಶ :**

ಅಗ್ನಿಯೆ ಎನ್ನನು ರಕ್ಷಿಸು ನೀನು
ಎನ್ನುತ ಸೀತೆಯು ಪ್ರದಕ್ಷಿಣೆ ಮಾಡಿ
ಹೆದರಿಕೆಯಿಲ್ಲದೆ ಧುಮುಕಿದಳದರಲಿ
ಚೀರಿದರಾಗಲೆ ಕಪಿಗಳು ಎಲ್ಲರು || ೫೫೮ ||

ವಿಷಣ್ಣವದನದ ರಾಮನ ಕಣ್ಗಳು
ಉಕ್ಕಿದವಾಗಲೆ ಕಂಬನಿ ತುಂಬುತ
ಆಗಲೆ ಬಂದರು ಕುಬೇರ ವರುಣರು
ದೇವೇಂದ್ರ ಯಮರು ವೃಷಭಧ್ವಜನು || ೫೫೯ ||

ಅಂದರು ರಾಮನೆ ಏನಿದು ಅನುಚಿತ
ಸೀತೆಯ ಚರಿತಕೆ ಸಂಶಯ ತರವೇ
ಇರುವಳು ಆಕೆಯು ವಿಶುದ್ಧ ಚಿನ್ನವು
ಸಂಶಯ ಬೇಡಾ ಎಂದಿಗು ತಿಳಿ ನೀ || ೫೬೦ ||

ಆಗಲೆ ಅಚ್ಚರಿ ಮಿಂಚಿತು ಚಿತೆಯಲಿ
ಅಗ್ನಿಯು ಹೊಂದುತ ಪುರುಷಾಕೃತಿಯನು
ಎತ್ತುತ ತಂದನು ಜನಕಜೆಯನ್ನು
ಹೊಳೆಯುತಲಿದ್ದಳು ಅಪರಂಜಿಯಂತೆ || ೫೬೧ ||

**ಯಜ್ಞಪುರುಷನ ಆಜ್ಞೆಯು :**

ಮುಡಿದಿಹ ಹೂಗಳು ಧರಿಸಿದ ಒಡವೆಯು
ಕಂದದೆ ಕುಂದದೆ ಹಾಗೆಯೆ ಇದ್ದವು
ರಾಮನೆ ಜಾನಕಿ ಅಪ್ಪಟ ಶುದ್ಧಳು
ರಾವಣನಿಟ್ಟನು ಇವಳನು ವನದಲಿ || ೫೬೨ ||

ಕನಸಲಿ ಮನಸಲಿ ಎಂದಿಗು ನಿನ್ನನು
ಅಲ್ಲದೆ ಬೇರೆಯ ಯಾರನು ನೆನೆಸಳು
ಈಗಲೆ ಇವಳನು ಸ್ವೀಕರಿಸೆಲೊ ನೀ
ಇದುವೇ ಎನ್ನಯ ಆಜ್ಞೆಯು ತಿಳಿ ನೀ || ೫೬೩ ||

ರಾಮನ ಕಂಬನಿ ಉಕ್ಕಿತು ಆಗಲೆ
ಯಜ್ಞದ ಪುರುಷನೆ ಜಾನಕಿ ಬಗೆಯನು
ಒಲ್ಲೆನು ನಿಜಕೂ ಸಂಶಯವಿಲ್ಲವು
ಲೋಕದ ರೀತಿಯು ಒಲ್ಲೆನು ಕೂಡಾ ॥ ೫೬೪ ॥

ರಾವಣ ಗೃಹದಲಿ ಬಹು ದಿನ ಇದ್ದರು
ಪರಿಕಿಸಲಾರದೆ ಹೊಂದಿದೆನಾದರೆ
ದಶರಥ ಕುವರನು ಕಾಮುಕನಿರುವನು
ಕಾರಣ ಹೊಂದಿದ ಹೆಂಡತಿಯನ್ನು ॥ ೫೬೫ ॥

ಎನ್ನುವ ಮಾತದು ಉಳಿಯುತಲಿದ್ದಿತು
ಒಲ್ಲೆನು ನಾನೂ ರಾವಣನೆಂದಿಗು
ಸೀತೆಯು ಕೆಣಕಲು ಸಾಧ್ಯವೆ ಇಲ್ಲವು
ನಿನ್ನಯ ವಚನವೆ ಸಾಕ್ಷಿಯು ಜಗಕೆ ॥ ೫೬೬ ॥

ಶ್ರೀರಾಮನಿಂದ ಸೀತೆಯ ಸ್ವೀಕಾರ :

ಸಂತಸದಿಂದಲಿ ರಾಮನು ನಡೆಯುತ
ಅಗ್ನಿಯ ಬದಿಯಲಿ ಹೋಗುತ ಆತನು
ಸೀತೆಯ ಕೈಯನು ಹಿಡಿಯುತ ಬಂದನು
ಸಂತಸ ಕಂಬನಿ ಸುರಿಸಿದರೆಲ್ಲರು ॥ ೫೬೭ ॥

ದಶರಥನಿಂದ ರಾಮನ ಪ್ರಶಂಸೆ :

ವೃಷಭಧ್ವಜನು ಹೇಳಿದ ರಾಮಗೆ
ನಿನ್ನಯ ಜನ್ಮದ ತಂದೆಯು ದಶರಥ
ಬಂದಿಹನಿಲ್ಲಿಗೆ ವಿಮಾನದಲಿರುವ
ನಿನ್ನನು ನೋಡಲು ಇಚ್ಛಿಪ ಆತನು ॥ ೫೬೮ ॥

ರಾಮ-ಲಕ್ಷ್ಮಣರು ತಂದೆಯ ಕಾಣುತ
ನಮಿಸಿದರವನಿಗೆ ಇಬ್ಬರು ಅಲ್ಲಿಯೆ
ರಾಮನೆ ನಿನ್ನಯ ಪಟ್ಟಕೆ ವಿಘ್ನವ
ತಂದುದು ಎಲ್ಲವು ದೈವದ ಹಂಚಿಕೆ ॥ ೫೬೯ ॥

ಎಂಬುದು ತಿಳಿಯಿತು ಈಗಲೆ ನನಗೆ
ರಾವಣ ವಧೆಯನು ಮಾಡುವ ಕಾರ್ಯವು
ಅದ್ಭುತವಾಯಿತು ನೋಡಿದೆ ನಾನೂ
ರಾಜ್ಯಕೆ ಹೋಗುತ ರಾಜ್ಯವ ಆಳು ॥ ೫೭೦ ॥

ಲಕ್ಷ್ಮಣ ನಿನ್ನಯ ಸೇವೆಯು ಅಪಾರ
ವರ್ಣನೆ ಮಾಡಲು ಆಗದು ಎನಗೆ
ಜಾನಕಿ ಕುವರಿಯೆ ರಾಮನ ಮಾತನು
ನೆನೆಯುತ ಮನದಲಿ ದುಃಖಿಸಬೇಡಾ ॥ ೫೭೧ ॥

ನಿನ್ನನು ಶುದ್ಧಳು ಎನ್ನುತ ಜಗದಲಿ
ತೋರಲು ಮಾಡಿದ ಪರೀಕ್ಷೆ ಅದುವೇ
ಹೆಚ್ಚಿಗೆ ಹೇಳಲು ಏನೂ ಇಲ್ಲವು
ರಾಮನೆ ನಿನಗೆ ಪರದೇವತೆ ತಿಳಿ ॥ ೫೭೨ ॥

ಎನ್ನುತ ಹರಸುತ ಮೂವರನಾಗಲೆ
ಹೊರಟನು ದಶರಥ ವಿಮಾನದಿಂದಲಿ
ತೆರಳಿದ ಹಾಗೆಯೆ ಇಂದ್ರಲೋಕಕೆ
ಇಂದ್ರನು ಇದ್ದನು ಇನ್ನೂ ಇಲ್ಲಿಯೆ ॥ ೫೭೩ ॥

ಇಂದ್ರನ ವರ :

ಅಂಜಲಿಬದ್ಧನು ಆಗಿಹ ರಾಮನ
ನೋಡುತ ಇಂದ್ರನು ತುಷ್ಟನು ಆಗುತ
ಅಂದನು ಆಗಲೆ ಕೇಳೈ ರಾಮನೆ
ತೃಪ್ತನು ಆಗಿಹೆ ನಿನ್ನಯ ಕಾರ್ಯಕೆ ॥ ೫೭೪ ॥

ಮನಸಿಗೆ ತೋಚಿದ ವರವನು ಕೇಳೈ
ಕೊಡುವೆನು ಈಗಲೆ ಸಂತಸದಿಂದಲಿ
ರಾಮನು ಕೈಗಳ ಮುಗಿಯುತ ಅಂದನು
ದೇವನೆ ನಿನ್ನಯ ಕರುಣೆಯು ಅಪಾರ ॥ ೫೭೫ ॥

ಎನ್ನಯ ವಾನರರೆಲ್ಲರು ಹೋರುತ
ಯುದ್ಧದಿ ಮಡಿದಿಹರೆಷ್ಟೋ ಕಪಿಗಳು
ಮಡಿದರು ಎಲ್ಲರು ಎನ್ನಯ ಕಾರಣ
ಅವರಲಿ ಜೀವವ ತುಂಬಿಸು ಈಗಲೆ ॥ ೫೭೬ ॥

ಎನ್ನಲು ತಥಾಸ್ತು ಅಂದನು ಇಂದ್ರನು
ಕೂಡಲೆ ಎದ್ದರು ಮಡಿದಿಹ ಕಪಿಗಳು
ನಿದ್ದೆಯ ಕಳೆಯುತ ಏಳುವ ತೆರದಲಿ
ಸಂತಸ ಉಕ್ಕಿತು ವಾನರ ಸೈನ್ಯದಿ ॥ ೫೭೭ ॥

ದೇವರ ಗಣವೂ ಹರಸುತ ರಾಮನ
ಅಂದಿತು ರಾಮನೆ ಹೋಗೈ ಈಗಲೆ
ಕೋಸಲ ರಾಜ್ಯಕೆ ಹೋಗುತ ನೀನು
ಭರತನ ಕಾಣುತ ರಾಜ್ಯವ ಆಳು ॥ ೫೭೮ ॥

ಎನ್ನುತ ಹೊರಟರು ದೇವರು ಎಲ್ಲರು
ರಾಮನು ಹೇಳಿದ ವಾನರ ಸೇನೆಗೆ
ವಿಶ್ರಮ ಹೊಂದಿರಿ ಎಲ್ಲರು ನೀವು
ಸಂತಸಭರದಲಿ ವಿಶ್ರಮ ವಾರಿಗೆ || ೫೭೯ ||

ಬೆಳಗಿನ ಸಮಯದಿ ವಿಭೀಷಣ ಬಂದ
ರಾಘವ ಎಲ್ಲವು ಸಿದ್ಧವು ಆಗಿದೆ
ಸ್ನಾನವ ಲೇಪನ ಮಾಡಿರಿ ನೀವು
ಅರಮನೆಯಲ್ಲಿಯೆ ಎಲ್ಲವು ಸಿದ್ಧವು || ೫೮೦ ||

**ಶ್ರೀರಾಮನ ಮನಸ್ಸು ಅಯೋಧ್ಯೆಯ ಕಡೆಗೆ :**

ರಾಮನು ಅಂದನು ವಿಭೀಷಣ ದೊರೆಯೆ
ಸುಗ್ರೀವ ಹಾಗೂ ಇತರರ ಒಯ್ಯುತ
ಸ್ನಾನವ ಪಾನವ ಎಲ್ಲವ ಮಾಡಿಸು
ಎನ್ನಯ ಮನವದು ಭರತನ ಕಡೆಗಿದೆ || ೫೮೧ ||

ಈಗಲೆ ಹೋಗುತ ಕಾಣುವೆ ಅವನನು
ಹೋಗಲು ದಾರಿಯು ದೂರವು ದುರ್ಗಮ
ಲಂಕೆಯ ರಾಜನು ಅಂದನು ರಾಮಗೆ
ಅಣ್ಣನ ಪುಷ್ಪಕವಿಮಾನವಿನ್ನೂ || ೫೮೨ ||

ಎನ್ನಯ ಬಳಿಯೇ ಉಳಿಸಿಹೆ ನಾನು
ಕುಬೇರ ಅಣ್ಣನ ವಿಮಾನವಿರುವದು
ರಾವಣ ಅಣ್ಣನು ಬಲದಲಿ ತಂದನು
ನಿನ್ನಯ ಕಾರಣ ಉಳಿಸಿಹೆ ಇನ್ನೂ || ೫೮೩ ||

ಒಡೆಯನ ಇಚ್ಛೆಯ ತೆರದಲಿ ಸಾಗುವ
ವಿಮಾನವಿರುವದು ಪುಷ್ಪಕ ನಮ್ಮದು
ಒಂದೇ ಹಗಲಿನ ಸಮಯದಿ ಒಯ್ಯುತ
ಮುಟ್ಟಿಸುತಿರುವದು ಚಿಂತೆಯು ಬೇಡಾ ॥ ೫೮೪ ॥

ಎರಡೇ ದಿನಗಳು ಉಳಿಯುತ ಇಲ್ಲಿಯೆ
ಎನ್ನಯ ಸೇವೆಯ ಪಡೆಯೈ ನೀನು
ಎನ್ನಲು ರಾಮನು ಅಂದನು ಅವನಿಗೆ
ನಿನ್ನಯ ಸೇವೆಯು ಸಂದಿದೆ ಆಗಲೆ ॥ ೫೮೫ ॥

ನೀನೂ ಎನ್ನಯ ಹೃದಯದ ಗೆಳೆಯನು
ಭರತನ ಭೆಟ್ಟಿಗೆ ಹೋಗುವದೊಂದೇ
ತುಂಬಿದೆ ಮನದಲಿ ಈಗಿನ ಸಮಯದಿ
ವಚನವ ಕೊಟ್ಟಿಹೆ ಭರತಗೆ ಅಂತೆಯೆ ॥ ೫೮೬ ॥

ವಿಭೀಷಣನಾಗ ತಂದನು ಪುಷ್ಪಕ
ಚಿನ್ನ ವಜ್ರ ವೈಡೂರ್ಯದಿಂದಲಿ
ನಿರ್ಮಿತವಾಗಿಹ ಆಸನ ಸಹಿತದಿ
ಮುತ್ತಿನ ಝಾಲರಿ ತೂಗುತಲಿದ್ದವು ॥ ೫೮೭ ॥

ವಿಶ್ವಕರ್ಮನೇ ಮಾಡಿದ ಪುಷ್ಪಕ
ಸ್ಫಟಿಕದ ಶಿಲೆಯಿಂ ನೆಲವದು ಆಗದೆ
ರಾಮಗೆ ತಿಳಿಸಿದ ವಿಭೀಷಣನಾಗ
ಪುಷ್ಪಕ ಬಂದಿದೆ ಹೊರಡಲು ಸಿದ್ಧವು ॥ ೫೮೮ ॥

ಕೈಗಳ ಮುಗಿಯುತ ಲಂಕೆಯ ರಾಜನು
ಕೇಳಿದ ರಾಮಗೆ ಆಜ್ಞೆಯು ಏನು ?
ಎನ್ನಲು ಹೇಳಿದ ರಾಮನು ಅವನಿಗೆ
ಎನ್ನಯ ಜೊತೆಯಲಿ ಕಾದಿಹ ಯೋಧರು ॥ ೫೯ ॥

ವಾನರವೀರರು ಎಲ್ಲರು ಕೂಡಾ
ಸಾಹಸ ಕಾರ್ಯವ ಮಾಡಿದರೆಲ್ಲರು
ಗೌರವ ತೋರುತ ಎಲ್ಲರು ಅವಂಗೆ
ಉಡುಗೆಯ ತೊಡುಗೆಯ ಕೊಡುತಲಿ ಅಲ್ಲದೆ ॥ ೬೦ ॥

ರತ್ನಾಭರಣವ ಕೊಡುತಲಿ ಅವರಿಗೆ
ಸತ್ಕಾರ ಮಾಡಿ ಕಳಿಸೈ ಅವರನು
ಅಪೂರ್ವ ಎನಗೂ ಗೌರವ ತಿಳಿ ನೀ
ಕೂಡಲೆ ರಾಜನು ತಿಳಿಸುತ ಅವುಗಳ ॥ ೬೧ ॥

ಹಂಚಿದ ರಾಮನ ಎದುರಿಗೆ ಅವರಿಗೆ
ಸಂತಸಬಡುತಲಿ ರಾಮನು ಆಗಲೆ
ಹತ್ತಿದ ಪುಷ್ಪಕ ಸೀತೆಯ ಸಂಗಡ
ಲಕ್ಷ್ಮಣ ಕೂಡಾ ಏರಿದ ಹಿಂದೆಯೆ ॥ ೬೨ ॥

ವಿಮಾನ ದ್ವಾರದಿ ನಿಲ್ಲುತ ರಾಮನು
ಅಂದನು ಮಿತ್ರರೆ ಎಲ್ಲರು ನೀವು
ಸಾಹಸ ಮಾಡುತ ಎನ್ನಯ ಕಾರ್ಯದಿ
ಪಟ್ಟಿಹ ತೊಂದರೆ ಮರೆಯೆನು ಎಂದೂ ॥ ೬೩ ॥

ಹೋಗಿರಿ ಎಲ್ಲರು ನಿಮ್ಮಯ ತಾಣಕೆ
ಮಿತ್ರನು ಮಾಡುವ ಎಲ್ಲಾ ಕಾರ್ಯವ
ಮಾಡಿಹೆ ನೀನೂ ಸುಗ್ರೀವರಾಜ
ಕಿಷ್ಕಿಂಧೆಯಲಿ ರಾಜ್ಯವ ಆಳು ॥ ೫೯೪ ॥

ವಿಭೀಷಣರಾಜ ಲಂಕೆಯ ಒಡೆಯನೆ
ಧಾರ್ಮಿಕ ರಾಜನು ಇರುತಿಹೆ ನೀನು
ನಿನ್ನಯ ಗೊಡವೆಗೆ ಯಾರೂ ಬಾರರು
ಹೋಗುವೆ ನಾನೂ ಆಯೋಧ್ಯೆಗೆ ಈಗ ॥ ೫೯೫ ॥

ಕಳಿಸಿರಿ ಎಲ್ಲರು ಬಿಚ್ಚಿದ ಮನದಲಿ
ಹೋಗಲು ಒಪ್ಪಿಗೆ ನೀಡಿರಿ ಎಲ್ಲರು
ಎನ್ನಲು ಎಲ್ಲರು ವಾನರ ಮುಖ್ಯರು
ಅಲ್ಲದೆ ವಿಭೀಷಣ ರಾಜನು ಕೂಡ ॥ ೫೯೬ ॥

ಅಂದರು ರಾಮನೆ ನಾವೂ ಬರುವೆವು
ಅಲ್ಲಿಯ ನಗರದಿ ತಿರುಗುವ ಇಚ್ಛೆಯು
ಅಲ್ಲದೆ ನಿನ್ನಯ ಪಟ್ಟಾಭಿಷೇಕ
ನೋಡುವ ಇಚ್ಛೆಯು ಎಮಗೂ ಇರುವದು ॥ ೫೯೭ ॥

ರಾಮನು ಎಂದನು ಇನ್ನೂ ಸಂತಸ
ಹತ್ತಿರಿ ಎಲ್ಲರು ಪುಷ್ಪಕದೊಳಗಡೆ
ಹತ್ತಿದರೆಲ್ಲರು ವಾನರ ವೀರರು
ಸಚಿವರ ಸಹಿತದಿ ವಿಭೀಷಣರಾಜ ॥ ೫೯೮ ॥

**ಎಲ್ಲರೊಂದಿಗೆ ಶ್ರೀರಾಮನ ಪ್ರಯಾಣ :**

ಎದ್ದಿತು ಪುಷ್ಪಕ ಮೇಘದ ತೆರದಲಿ
ಹಾಗೆಯೆ ತೋರುತ ಹೇಳುತ ಸೀತೆಗೆ
ರಾಮನು ವಿವರಣೆ ನೀಡುತ ತಿಳಿಸಿದ
ಇದುವೇ ಲಂಕಾನಗರವು ನೋಡು ॥ ೯೯ ॥

ವಿಶ್ವಕರ್ಮನೇ ಕಟ್ಟಿದ ನಗರವು
ಇದುವೇ ರಾವಣ ಸತ್ತಿಹ ತಾಣವು
ಕುಂಭನು ಅಲ್ಲದೆ ಇತರೇ ವೀರರು
ಸತ್ತಿಹ ತಾಣಗಳೆಲ್ಲವ ನೋಡು ॥ ೧೦೦ ॥

ಸಾಗರ ದಾಟಲು ನಿರ್ಮಿತವಾಗಿಹ
ಸೇತುವೆ ಇದುವೇ ನೋಡೆಲೆ ನೀನು
ಇದುವೇ ಇರುವದು ಕಾಂಚನ ಶೈಲವು
ಮೈನಾಕ ಗಿರಿಯು ಸಮುದ್ರದಿ ಇಹುದು ॥ ೧೦೧ ॥

ಉತ್ತರ ತೀರದ ಸೇತುಬಂಧವು
ಇರುವದು ನಿಜಕೂ ಪುಣ್ಯಕ್ಷೇತ್ರವು
ಇಲ್ಲಿಯೆ ಪ್ರಸನ್ನನಾಗಿಹ ಈಶ್ವರ
ಕಾಣುವದೀಗಲೆ ಕಿಷ್ಕಿಂಧೆ ಕೂಡ ॥ ೧೦೨ ॥

ಆಗಲೆ ಅಂದಳು ಸೀತಾದೇವಿಯು
ಆರ್ಯನೆ ಇದುವೇ ವಾನರ ತಾಣವು
ಅವರಿಗೆ ಸತಿಯರು ಇರುವದು ಇಲ್ಲಿಯೆ
ಅವರೂ ಬಂದರೆ ಒಳ್ಳೆಯದಲ್ಲವೆ? ॥ ೧೦೩ ॥

ಕೂಡಲೆ ರಾಮನು ತಡೆದನು ಪುಷ್ಪಕ
ಕರೆಯುತ ಆಗಲೆ ಸುಗ್ರೀವನನ್ನು
ಹೇಳಿದ ಅವನಿಗೆ ಎಲ್ಲರ ಸತಿಯರ
ಕರೆಯಲು ಬರಲಿಕೆ ಅಯೋಧ್ಯಾಪುರಿಗೆ ॥ ೭೦೪ ॥

ಬಂದರು ಎಲ್ಲರು ಹೊರಟಿತು ಪುಷ್ಪಕ
ಸೀತೆಯೆ ಇದುವೇ ಋಷ್ಯಮೂಕವು
ಅಲ್ಲಿಯೆ ಮೊದಲಿಗೆ ಸುಗ್ರೀವ ಕಂಡ
ವಾಲಿಯು ಕೊಲ್ಲುವ ಪ್ರತಿಜ್ಞೆ ಇಲ್ಲಿಯೆ ॥ ೭೦೫ ॥

ಕಾಣುವದೀಗಲೆ ಪಂಪಾಸರಸಿಯು
ಇಲ್ಲಿಯೆ ಹಲುಬಿದೆ ನಿನ್ನಯ ವಿರಹದಿ
ಶಬರಿಯು ಕಂಡೆನು ಇಲ್ಲಿಯೆ ನಾನು
ಕಬಂಧ ವಧೆಯನು ಮಾಡಿದೆನಿಲ್ಲಿಯೆ ॥ ೭೦೬ ॥

ಇದುವೇ ಇರುವದು ಜನಸ್ಥಾನವದು
ಖರದೂಷಣರನು ಇಲ್ಲಿಯೆ ಕೊಂದೆನು
ಕಾಣುವದಲ್ಲಿಯೆ ಮಹಾವೃಕ್ಷವು
ಅಲ್ಲಿಯೆ ಸತ್ತನು ಜಟಾಯು ಕಾದುತ ॥ ೭೦೭ ॥

ಇದುವೇ ಸುಂದರ ಆಶ್ರಮವೆಮ್ಮದು
ರಾವಣ ಒಯ್ದುದು ಇಲ್ಲಿಯೆ ನಿನ್ನನು
ಮುಂದಕೆ ಇರುವದು ಅಗಸ್ತ್ಯರಾಶ್ರಮ
ಶರಭಂಗ ಮುನಿಯ ಆಶ್ರಮವಿಲ್ಲಿದೆ ॥ ೭೦೮ ॥

ಇಂದ್ರನು ಬಂದುದು ಇಲ್ಲಿಯೆ ಅಲ್ಲವೆ
ವಿರಾಧವಧೆಯೂ ಇಲ್ಲಿಯೆ ಆಯಿತು
ಕಾಣುವಡದುವೇ ಚಿತ್ರಕೂಟಗಿರಿ
ಭರತನು ಬಂದುದು ಇಲ್ಲಿಯೆ ಅಲ್ಲವೆ ‖ ೬೦೯ ‖

ಭರದ್ವಾಜರದು ಆಶ್ರಮ ಅದುವೇ
ಬದಿಯಲಿ ಹರಿಯುವ ಭಾಗೀರಥಿಯು
ಸುತ್ತಲು ಅರಳಿದ ವನಗಳ ನೋಡು
ಶೃಂಗಿವೇರಪುರ ಇರುವದು ಇದುವೇ ‖ ೬೧೦ ‖

ಇಲ್ಲಿಯೆ ಅಲ್ಲವೆ ಬಂದುದು ಗುಹನು
ಕಾಣುತಲಿರುವದು ಸರಯೂ ನದಿಯು
ತೀರದ ಉದ್ದಕು ಕಾಣುವಿಯಲ್ಲವೆ
ಎಮ್ಮಯ ಹಿರಿಯರು ಮಾಡಿದ ಯಜ್ಞದ ‖ ೬೧೧ ‖

ಯೂಪಸ್ತಂಭಗಳೆಲ್ಲವ ನೀನು
ದೂರದಿ ಕಾಣುವ ನಗರವೆ ಅಯೋಧ್ಯೆ
ತಂದೆಯು ನಗರವು ನಮನವ ಹೇಳು
ಬಂದಿಹೆ ಸುರಕ್ಷಿತ ಮರಳುತ ನೀನು ‖ ೬೧೨ ‖

ಆಗಲೆ ಏಳುತ ಕಪಿವರರೆಲ್ಲರು
ಸುಗ್ರೀವ ಹಾಗೂ ವಿಭೀಷಣ ರಾಜ
ನೋಡಿದರೆಲ್ಲರು ಸುಂದರ ನಗರವ
ತಿಳಿದರು ಅದುವೇ ಇಂದ್ರನ ನಗರವು ‖ ೬೧೩ ‖

ಅಯೋಧ್ಯೆಯ ಸಮೀಪ ವನದಲ್ಲಿ ಇಳಿಯುವದು :

ಇಳಿದರು ಎಲ್ಲರು ಅಲ್ಲಿಯೆ ವನದಲಿ
ಚೈತ್ರ ಮಾಸದಲಿ ಶುಕ್ಲ ಪಂಚಮಿಯು
ಅಂದಿಗೆ ಮುಗಿಯಿತು ಹದಿನಾಲ್ಕು ವರ್ಷ
ರಾಮನು ಇಚ್ಛಿಸಿ ಮುನಿಗಳ ದರ್ಶನ || ೬೧೪ ||

ಭರದ್ವಾಜ ಮುನಿಯು ಕಾಣುತ ರಾಮನು
ಕೇಳಿದ ದೇಶದ ವಿಷಯವ ಆತನು
ಇರುವದೆ ಇಲ್ಲಿಯೆ ಸುಭಿಕ್ಷವು ಈಗ
ಪ್ರಜೆಗಳು ಇರುವರೆ ತುಷ್ಟರು ಆಗುತ || ೬೧೫ ||

ಎನ್ನಯ ಮಾತೆಯರೆಲ್ಲರು ಇರುವರೆ
ಆರೋಗ್ಯ ಸಹಿತದಿ ಜೀವಿತರಿಹರೇ
ನಗುತಲಿ ಮುನಿಗಳು ಅಂದರು ರಾಮಗೆ
ಭರತನು ಜಟೆಯನು ಧರಿಸುತ ನಿನ್ನಯ || ೬೧೬ ||

ದಾರಿಯ ಕಾಯುತಲಿರುತಿಹನಾತನು
ಪಾದುಕೆ ಇಡುತಲಿ ಪಟ್ಟದ ಮೇಲೆ
ರಾಜ್ಯವ ಆಳುವ ನಿನ್ನಯ ಹೆಸರಿಲೆ
ಗೃಹದಲಿ ಎಲ್ಲರು ಕುಶಲದಿ ಇರುವರು || ೬೧೭ ||

ರಾಜ್ಯವ ತೊರೆಯುತ ಹೋಗುವ ಸಮಯದಿ
ನೋಡುತ ನಿನ್ನನು ಮರುಕವು ಹುಟ್ಟಿತು
ಯುದ್ಧದಿ ಗೆಲ್ಲುತ ಮಿತ್ರರ ಸಹಿತದಿ
ಬಂದಿಹ ನಿನ್ನನು ನೋಡುತ ಎನಗೆ || ೬೧೮ ||

ಸಂತಸ ಉಕ್ಕಿದೆ ರಘುಕುಲತಿಲಕನೆ
ಇಂದಿನ ವರೆಗೂ ಆದುದು ಎಲ್ಲವ
ಬಲ್ಲೆನು ನಾನೂ ತಪಸಿನ ಬಲದಲಿ
ಕೊಡುವೆನು ನಾನೂ ವರವನು ನಿನಗೆ || ೬೧೯ ||

ಈ ದಿನ ಇಲ್ಲಿಯೆ ಕಳೆಯುತ ನೀನು
ನಾಳೆಯ ದಿನವೇ ಅಯೋಧ್ಯೆಗೆ ಹೊರಡು
ಒಪ್ಪುತ ರಾಮನು ಕೇಳಿದ ವರವನು
ಸುತ್ತಲು ಎಲ್ಲೆಡೆ ಅಕಾಲವಾದರು || ೬೨೦ ||

ಫಲಗಳು ಸುರಿಯಲಿ ನಾಳೆಯ ದಿನವೇ
ಹೋಗುವ ಸಮಯದಿ ಅರಳಲಿ ಹೂಗಳು
ಋಷಿಗಳು ಅಂದರು ತಥಾಸ್ತು ಎಂದು
ಬಿಟ್ಟವು ಎಲ್ಲೆಡೆ ಫಲಪುಷ್ಪಗಳೂ || ೬೨೧ ||

ತಿಳಿದರು ಎಲ್ಲರು ರಾಮನು ಬರುವನು
ಕಪಿಗಳು ಎಲ್ಲರು ತಿಂದರು ತೇಗುತ
ಕುಡಿದರು ಜೇನನು ಜಿಗಿದಾಡುತ್ತಲೇ
ಆಗಲೆ ರಾಮಗೆ ಬಂದಿತು ಯೋಜನೆ || ೬೨೨ ||

ಭರತನ ಮನಸ್ಸನ್ನು ತಿಳಿಯಲು ಶ್ರೀರಾಮನ ಆತುರ :

ಕರೆಯುತ ಹನುಮನ ಅಂದನು ಅವನಿಗೆ
ಕಪಿವರ ಹೋಗುತ ಅಯೋಧ್ಯೆಗೆ ನೀನು
ಇರುವರೆ ಎಲ್ಲರು ಕುಶಲದಿ ತಿಳಿ ನೀ
ಹಾಗೆಯೆ ಹೋಗುತ ಗುಹನನು ಕಾಣುತ || ೬೨೩ ||

ಎನ್ನಯ ಬರವಿನ ಸುದ್ದಿಯ ತಿಳಿಸು
ಸಂತಸ ಪಡುವನು ಎನ್ನಯ ಮಿತ್ರನು
ನಂತರ ಕಾಣುತ ಭರತನ ನೀನು
ಎನ್ನಯ ಕುಶಲವ ಅವನಿಗೆ ತಿಳುಹಿಸು || ೬೩೪ ||

ಸೀತೆಯು ಲಕ್ಷ್ಮಣ ಸಹಿತದಿ ಬಂದುದು
ಇಂದಿನ ವರೆಗೂ ಆದುದು ಎಲ್ಲವ
ತಿಳುಹಿಸು ಅವನಿಗೆ ಒಂದೂ ಬಿಡದಲೆ
ಹೇಳುವ ಕಾಲದಿ ಗಮನಿಸು ಮುಖವನು || ೬೩೫ ||

ಎನ್ನಯ ವಿಷಯದಿ ಸಂತಸಪಡುವನೆ
ಇಲ್ಲವೆ ಮುಖದಲಿ ಗಂಟನು ತರುವನೆ
ಮಾತನು ಆಡುವ ರೀತಿಯ ಪರಿಕಿಸು
ನೋಡುವ ನೋಟದ ಪರಿಯನು ತಿಳಿ ನೀ || ೬೩೬ ||

ಭರತನ ಇಂಗಿತ ತಿಳಿಯೈ ನೀನು
ಇಂದಿನ ವರೆಗೂ ರಾಜ್ಯವ ಆಳಿದ
ಭರತನ ಮನವೂ ರಾಜ್ಯವ ಆಳಲು
ಇಚ್ಛಿಪುದಾದರೆ ಅಚ್ಚರಿಯಲ್ಲವು || ೬೩೭ ||

ಹಾಗೆಯೆ ಇದ್ದರೆ ಭರತನೆ ಆಳಲಿ
ಹೋಗುವೆ ನಾನು ಹಿಂದಕೆ ಮತ್ತೆ
ಆಶ್ರಮ ಬಿಡುತಲಿ ಬರುವದರೊಳಗೇ
ಭರತನ ಮನವನು ಅರಿಯುತ ತಿಳುಹಿಸು || ೬೩೮

**ಹನುಮಂತನು ಭರತನನ್ನು ಕಾಣುವುದು :**

ಕೂಡಲೆ ಹಾರುತ ಅಂಜನಿಕುವರನು
ಹೋಗುತ ಗುಹನಿಗೆ ಸುದ್ದಿಯ ತಿಳಿಸುತ
ಹಾರಿದ ಹಾಗೆಯೇ ನಂದೀ ಗ್ರಾಮಕೆ
ಆಶ್ರಮವಾಸೀ ಭರತನ ಕಂಡನು ॥ ೬೨೯ ॥

ನಾರು ಬಟ್ಟೆಯನು ಉಟ್ಟಿಹ ಭರತನು
ಕೃಷ್ಣಾಜಿನವನು ಹೊದ್ದಿಹ ಆತನು
ತಲೆಯಲಿ ಇದ್ದಿತು ಬೆಳೆದಿಹ ಜಟೆಯು
ತಾಪಸಿ ತೆರದಲಿ ಕುಳಿತಿಹ ಆತನು ॥ ೬೩೦ ॥

ಹನುಮನು ಬರುತಲಿ ಕೈಗಳ ಜೋಡಿಸಿ
ರಘುಕುಲ ತಿಲಕನು ಕುಶಲದಿ ಇರುವನು
ನಿನ್ನಯ ಕುಶಲವ ಕೇಳಿಹನಾತನು
ಬರುವನು ಲಕ್ಷ್ಮಣ ಜಾನಕಿ ಸಹಿತದಿ ॥ ೬೩೧ ॥

ಕೊಲ್ಲುತ ರಾವಣ ರಕ್ಕಸರಾಜನ
ಬರುವನು ಈಗಲೆ ಮುಹೂರ್ತ ಸಮಯದಿ
ಕೇಳುತ ಈ ನುಡಿ ಸಂತಸ ಉಕ್ಕಿತು
ಕುಸಿದನು ನೆಲದಲಿ ಹರ್ಷದ ಭಾರದಿ ॥ ೬೩೨ ॥

ನಂತರ ಚೇತನ ಹೊಂದುತ ಭರತನು
ಸೌಮ್ಯನೆ ಯಾರಿಹೆ ದೇವನೊ ಮಾನವ
ಹರ್ಷದ ಸುದ್ದಿಯ ತಂದಿಹ ನಿನಗೆ
ಕಾಣಿಕೆ ಏನನು ಕೊಡುವದು ಹೇಳು ॥ ೬೩೩ ॥

ಕೊಡುವೆನು ಈಗಲೆ ಲಕ್ಷ ಗೋವುಗಳ
ಅಲ್ಲದೆ ಕೊಡುವೆನು ನೂರು ಗ್ರಾಮಗಳ
ಸತ್ಕುಲ ಜನಿತರ ಕನ್ಯೆಯರನ್ನು
ಕೊಡುವೆನು ನಿಶ್ಚಯ ಮದುವೆಯ ಮಾಡುತ ॥ ೬೩೪ ॥

ಭರತನು ಕೇಳಿದ ಅಂಜನಿಪುತ್ರನ
ಏನಿದು ರಾಮನ ಸಖ್ಯರು ಕಪಿಗಳು
ಇಂತಹ ಕಾರಣ ಬಂದಿತು ಹೇಗೆ
ಎನ್ನಲು ಮಾರುತಿ ಹೇಳಿದ ಎಲ್ಲವ ॥ ೬೩೫ ॥

ಭರತನೆ ರಾಮನು ಇರುವನು ಈಗಲೆ
ಭರದ್ವಾಜಮುನಿ ಆಶ್ರಮದಲ್ಲಿಯೆ
ನಾಳೆಯೆ ಇರುವದು ಪುಷ್ಯನಕ್ಷತ್ರವು
ರಾಮನ ಕಾಣಲು ಯೋಗ್ಯ ಸಮಯವು ॥ ೬೩೬ ॥

**ಭರತನ ಸಂಭ್ರಮದ ಸ್ವಾಗತ :**

ಹರುಷದಿ ಉಕ್ಕುವ ಭರತನು ಆಗಲೆ
ಕರೆದನು ತಮ್ಮನ ಹೇಳಿದ ಅವನಿಗೆ
ಕೊಡಲೆ ಡಂಗುರ ಸಾರಲು ಹೇಳು
ಪೌರರು ಎಲ್ಲರು ತಿಳಿಯಲಿ ಸುದ್ದಿಯ ॥ ೬೩೭ ॥

ವಿಶೇಷ ಉತ್ಸವ ನಡೆಯಲಿ ಎಲ್ಲೆಡೆ
ಮಂಗಳ ವಾದ್ಯದ ರವವನು ಕೇಳಲಿ
ಸ್ತುತಿಪಾಠಕರೂ ವೈತಾಲಿಕರೂ
ನಡೆಯಲಿ ಎಲ್ಲರು ರಾಮನ ಕರೆಯಲು ॥ ೬೩೮ ॥

ಪೌರರು ಹಿರಿಯರು ಸುಮಂಗಲೆಯರೂ
ಸ್ವಾಗತ ಕೋರಲು ಎಲ್ಲರು ಸಾಗಲಿ
ನಂದಿಗ್ರಾಮದಿಂ ಅಯೋಧ್ಯೆಯ ವರೆಗೆ
ಮಾರ್ಗವು ಆಗಲಿ ಸಮತಳವಾಗಿಯೆ ॥ ೬೪೯ ॥

ಶೀತಲ ಜಲವನು ಎರಚುತ ಮಾರ್ಗಕೆ
ಹೂಗಳ ಹರಡಲಿ ಎಲ್ಲೆಡೆ ಆದರಲಿ
ಧ್ವಜಗಳು ಏರಲಿ ಮನೆಮನೆಗಳಲಿ
ತಳಿರು ತೋರಣವ ಕಟ್ಟಲಿ ಎಲ್ಲೆಡೆ ॥ ೬೫೦ ॥

ಪಂಚವರ್ಣದಲಿ ರಂಗವಲ್ಲಿಯನು
ಇಡುತಲಿ ಎಲ್ಲೆಡೆ ಮನೆಯಂಗಳದಲಿ
ಸುಂದರವಾಗಲಿ ನಗರವು ಇನ್ನೂ
ಎಲ್ಲವು ಆಗಲಿ ನಾಳಿನ ವರೆಗೆ ॥ ೬೫೧ ॥

ಹಾಗೆಯೆ ಸಾರಿದ ಡಂಗುರ ಎಲ್ಲೆಡೆ
ಮರುದಿನ ಬೆಳಗಿನ ಸಮಯದಿ ಆಯಿತು
ಎಲ್ಲವು ಸಿದ್ಧವು ಹೇಳಿದ ಪರಿಯಲಿ
ರಾಮನ ಸ್ವಾಗತ ಮಾಡಲು ಹೊರಟರು ॥ ೬೫೨ ॥

ಬ್ರಾಹ್ಮಣರಲ್ಲದೆ ಸಾಮಂತವರರು
ಪೌರರು ಸಚಿವರು ಎಂಟೂ ಜನರು
ಗಜಬಲ ಹಯಬಲ ಯೋಧರು ಕೂಡಾ
ರಾಜಮಾತೆಯರು ಎಲ್ಲರು ಹೊರಟರು ॥ ೬೫೩ ॥

ಶಂಖ ಭೇರಿಗಳ ವಾದ್ಯದ ಮಧ್ಯದಿ
ವಂದಿಮಾಗಧರು ಹೊಗಳುತ ನಡೆದಿರೆ
ಅಣ್ಣನ ಪಾದುಕೆ ತಲೆಯಲಿ ಧರಿಸುತ
ಶ್ವೇತ ಛತ್ರವನು ಹಿಡಿಸುತ ಮೇಲಕೆ || ೬೪೪ ||

ಭರತನು ಹೊರಟನು ರಾಮನ ಕಾಣಲು
ಅನತಿ ದೂರದಲಿ ಎದುರಿಗೆ ಕಂಡಿತು
ಹೊಳೆಯುವ ವಿಮಾನ ಪುಷ್ಪಕವಾಗಲೆ
ಹರ್ಷದ ಘೋಷವ ಮಾಡಿದರೆಲ್ಲರು || ೬೪೫ ||

ಆನೆಯ ಕುದುರೆಯ ರಥವನು ಏರಿದ
ಎಲ್ಲರು ಇಳಿಯುತ ನಿಂತರು ನೆಲದಲಿ
ಇಳಿಯಿತು ವಿಮಾನ ಧರೆಯಲಿ ಮೆಲ್ಲಗೆ
ಭರತನು ಮಣಿದನು ರಾಮನ ಪಾದಕೆ || ೬೪೬ ||

ಎತ್ತುತ ಭರತನ ಅಪ್ಪಿದ ರಾಮನು
ನಂತರ ಲಕ್ಷ್ಮಣ ಅಪ್ಪಿದ ಭರತನ
ತನ್ನಯ ಹೆಸರನು ಹೇಳುತ ಆತನು
ನಮನವ ಮಾಡಿದ ಸೀತೆಯ ಪಾದಕೆ || ೬೪೭ ||

ನಂತರ ಅಪ್ಪುತ ಸುಗ್ರೀವ ನೀಲ
ಜಾಂಬವ ಅಂಗದ ಸುಷೇಣ ಗವಾಕ್ಷ
ಶರಭ ಪನಸ ನಲ ಮೈಂದ ದ್ವಿವಿದರ
ಋಷಭ ಮಾರುತಿಯ ಗೌರವ ತೋರಿದ || ೬೪೮ ||

ಕಪಿವರರೆಲ್ಲರು ಕಾಮರೂಪಿಗಳು
ಮಾನವರೂಪವ ಧರಿಸುತ ಎಲ್ಲರು
ಇದ್ದರು ಅಲ್ಲಿಯೆ ಬೆರೆಯುತ ಕಾರ್ಯದಿ
ಭರತನು ಅಂದನು ಸುಗ್ರೀವನಿಗೆ || ೬೪೯ ||

ಇದ್ದೆವು ಸೋದರ ನಾಲ್ವರು ನಾವು
ಇಂದಿನ ದಿನದಿಂ ಐದನೆ ಸೋದರ
ನೀನೇ ಎನ್ನುತ ತಿಳಿದಿಹೆ ನಾನು
ಉಪಕಾರ ಮಾತ್ರ ಮಿತ್ರನ ಲಕ್ಷಣ || ೬೫೦ ||

ಅಪಕಾರ ಮಾತ್ರ ವೈರಿಯ ಲಕ್ಷಣ
ನಂತರ ತಿರುಗುತ ವಿಭೀಷಣನೆಡೆಗೆ
ಗೌರವದಿಂದಲಿ ಆದರ ಮಾಡುತ
ಅಂದನು ಎಂದಿಗು ಮರೆಯೆನು ನೆರವನು || ೬೫೧ ||

ನಂತರ ಬರುತಲಿ ಶತ್ರುಘ್ನನಾಗೆ
ರಾಮ ಲಕ್ಷ್ಮಣರ ಸೀತೆಯ ಪಾದಕೆ
ನಮಿಸುತ ನಿಂತನು ಸಂತಸ ತುಂಬಿ
ರಾಮನು ಹೋದನು ತಾಯಿಯ ಕಡೆಗೆ || ೬೫೨ ||

● ರಾಮನು ತಾಯಂದಿರಿಗೆ ನಮಸ್ಕರಿಸುವುದು :

ಕಂದಿದ ಕುಂದಿದ ತಾಯಿಯ ಪಾದಕೆ
ನಮನವ ಮಾಡುತ ಅಂದನು ರಾಮನು
ಮನ್ನಿಸು ತಾಯಿಯೆ ಎನ್ನನು ನೀನು
ಹೋದೆನು ಕಾಡಿಗೆ ಮಾತನು ಮೀರಿ || ೬೫೩ ||

ನಮಿಸಿದ ಸುಮಿತ್ರೆ ಕೈಕೆಯಿಯುವರಿಗೆ
ನಂತರ ನಮಿಸಿದ ಮಾತೆಯರೆಲ್ಲರ
ಪುರಜನರೆಲ್ಲರು ಸ್ವಾಗತ ಕೋರುತ
ನಮಿಸಿದರೆಲ್ಲರು ರಾಮನ ಪಾದಕೆ ॥ ೬೫೪ ॥

ಭರತನು ತೊಡಿಸಿದ ಪಾದುಕೆಗಳನು
ಒಪ್ಪಿಸುತಿರುವೆನು ನಿನ್ನಯ ರಾಜ್ಯವ
ಇಂದಿನ ವರೆಗೂ ಅಣತಿಯಂತೆಯೆ
ರಾಜ್ಯವ ಆಳಿದೆ ನಿನ್ನಯ ಸೇವಕ ॥ ೬೫೫ ॥

ಕೋಸಲದೊರೆಯೇ ಕರುಣಾನಿಧಿಯೇ
ಇಂದಿಗೆ ಆಯಿತು ಜೀವನ ಸಾರ್ಥಕ
ರಾಜಭಂಡಾರ ಧಾನ್ಯಾಗಾರವು
ಚತುರಂಗಬಲವು ಹೆಚ್ಚಿವೆ ದಶಗುಣ ॥ ೬೫೬ ॥

ರಾಮನು ಬಂದನು ಭರತನ ಸಹಿತದಿ
ಅಲ್ಲದೆ ಎಲ್ಲರ ಸಮೇತ ಕೂಡಾ
ನಂದೀ ಗ್ರಾಮಕೆ ಪುಷ್ಪಕದಲ್ಲಿಯೆ
ಇಳಿದರು ಎಲ್ಲರು ನಂದೀ ಗ್ರಾಮದಿ ॥ ೬೫೭ ॥

ರಾಮನು ಪುಷ್ಪಕವನ್ನು ಕುಬೇರನಿಗೆ ಕಳಿಸಿಕೊಡುವದು :

ನಂತರ ರಾಮನು ಅಂದನು ಪುಷ್ಪಕ
ಈಗಲೆ ಹೋಗುತ ಕುಬೇರನ ಸೇರು
ಇದುವೆ ಎನ್ನಯ ಅಣತಿ ಇರುವದು
ಹೋಯಿತು ಅದುವೇ ಕುಬೇರನ ಕಡೆಗೆ ॥ ೬೫೮ ॥

ನಂತರ ರಾಮನು ವಂದನೆ ಮಾಡಿದ
ವಶಿಷ್ಠ ಗುರುಗಳ ಪಾದಕೆ ಆತನು
ಕುಳಿತರು ಎಲ್ಲರು ಉಚಿತಾಸನದಲಿ
ಅಮೃತ ಘಳಿಗೆಯು ಕಂಡಿತು ಆಗಲೆ || ೬೫೯ ||

ಭರತನು ಅಂದನು ಕೈಗಳ ಜೋಡಿಸಿ
ಎನ್ನಯ ಮಾತೆಯ ಮಾತನು ನಡೆಸುತ
ವಂಧ್ಯನು ಆಗಿಹ ಅಣ್ಣನೆ ಕೇಳು
ನಿನ್ನಯ ಅಪ್ಪಣೆಯಂತೆಯೆ ನಾನು || ೬೬೦ ||

ಪಟ್ಟಾಭಿಷೇಕದ ಸಿದ್ಧತೆ :

ರಾಜ್ಯವ ಆಳಿದೆ ಸಮಯವು ಬಂದಿದೆ
ನಿನ್ನಯ ರಾಜ್ಯವ ಬಿಟ್ಟಿಹೆ ನಿನಗೆ
ಪಟ್ಟಕೆ ಏರುತ ರಕ್ಷಣೆ ಕೊಡು ನೀ
ನಾಳಿನ ದಿನವೇ ಪಟ್ಟಕೆ ಸೂಕ್ತವು || ೬೬೧ ||

ಹಾಗೆಯೆ ಆಗಲಿ ಎನ್ನುತ ರಾಮನು
ಕುಳಿತನು ಒಂದೆಡೆ ಶುಭಾಸನದಲಿ
ನಾಪಿತರಿಬ್ಬರು ಬರುತಲಿ ಆಗಲೆ
ಜಟೆಯನು ತೆಗೆದರು ಸ್ನಾನವು ಆಯಿತು || ೬೬೨ ||

ಶುದ್ಧರು ಆದರು ಅಂತೆಯೆ ಭರತನು
ಉಳಿದವರೆಲ್ಲರು ಶುದ್ಧರು ಆದರು
ರಾಜರ ವಸ್ತ್ರಾದಿ ಅಲಂಕಾರ ಸಹಿತ
ತೋರಿದರಿಬ್ಬರು ಸುಂದರ ಪುರುಷರು || ೬೬೩ ||

ಅಂತಃಪುರದಲಿ ನಾರಿಯರೆಲ್ಲರು
ಸೀತೆಗೆ ಸ್ನಾನವ ಮಾಡಿಸಿದಲ್ಲದೆ
ರತ್ನದ ಒಡವೆಯ ತೊಡಿಸುತ ಅವಳಿಗೆ
ರೇಶಿಮೆ ವಸ್ತ್ರವ ಉಡಿಸಿದರಾಗಲೆ ॥ ೬೬೪ ॥

ಸಂತಸದಿಂದಲಿ ರಾಮನ ತಾಯಿಯು
ವಾನರ ಸತಿಯರ ಶೃಂಗಾರ ಮಾಡಿ
ನೋಡುತ ಅವರನು ಸಂತಸಬಟ್ಟಳು
ರಾಮನು ಏರಿದ ಅಂದದ ರಥವನು ॥ ೬೬೫ ॥

ಜೊತೆಗೇ ಹೊರಟರು ಸುಗ್ರೀವ ಹನುಮ
ಆಗಲೆ ಸಚಿವರು ಅಶೋಕ ಸುಮಂತ್ರ
ಅಲ್ಲದೆ ವಿಜಯನು ಕಾಣುತ ವಶಿಷ
ಹೇಳಿದರವರಿಗೆ ಪಟ್ಟದ ವಿಷಯವ ॥ ೬೬೬ ॥

ವಶಿಷ್ಠ ಗುರುಗಳು ಹೇಳಿದರವನಿಗೆ
ಮಂಗಲದ್ರವ್ಯಗಳೆಲ್ಲವ ಈಗಲೆ
ತರಿಸಿರಿ ಎಷ್ಟೂ ವಿಳಂಬ ಮಾಡದೆ
ಆಯಿತು ಸಿದ್ಧತೆ ತ್ವರಿತದಿ ಆಗಲೆ ॥ ೬೬೭ ॥

ರಾಮನು ಬಂದನು ರಥದಲಿ ಶೋಭಿಸಿ
ಭರತನೆ ನಡೆಸಿದ ಸಾರಥಿಯಾಗುತ
ಲಕ್ಷ್ಮಣ ಕೈಯಲಿ ಇದ್ದಿತು ಚಾಮರ
ಶತ್ರುಘ್ನ ಕೈಲಿ ಶ್ವೇತಛತ್ರವೂ ॥ ೬೬೮ ॥

ವಿಭೀಷಣ ಕೈಲಿ ಇದ್ದಿತು ಚಾಮರ
ಸುಗ್ರೀವನಾಗ ಪರ್ವತಪ್ರಾಯದ
ಆನೆಯನೇರುತ ನಡೆದನು ಜೊತೆಗೆ
ಎದುರಿಗೆ ಬರುತಲಿ ಪೌರರು ಎಲ್ಲರು ‖ ೬೬೯ ‖

ಸ್ವಾಗತಗೈದರು ರಾಮಗೆ ಎಲ್ಲರು
ಮಂಗಲ ಗೀತೆಯ ಹಾಡುತ ಎಲ್ಲರು
ಸಾಗುತಲಿದ್ದರು ಅರಮನೆ ಕಡೆಗೆ
ಭರತಗೆ ಅಂದನು ರಾಮನು ಆಗಲೆ ‖ ೬೭೦ ‖

ಎನ್ನಯ ಮೊದಲಿನ ಭವನವ ಈಗಲೆ
ಕೊಡು ನೀ ಮೊದಲಿಗೆ ವಾನರರಾಜಗೆ
ತಂಗಲಿ ಅಲ್ಲಿಯೆ ಪತ್ನಿಯ ಸಮೇತ
ಕೂಡಲೆ ಭರತನು ಹಾಗೆಯೆ ಮಾಡಿದ ‖ ೬೭೧ ‖

ಭರತನು ಬೇಡಿದ ವಾನರ ರಾಜಗೆ
ರಾಮನ ಪಟ್ಟದ ಅಭಿಷೇಕಕಾಗಿ
ಜಲವದು ಬೇಕಿದೆ ಪುಣ್ಯತೀರ್ಥಗಳ
ಅಲ್ಲದೆ ಸಾಗರ ಜಲವೂ ಬೇಕು ‖ ೬೭೨ ‖

ನಿನ್ನಯ ಭಟರೇ ಸಾಧ್ಯವು ತರಲಿಕೆ
ಕೂಡಲೆ ಹೊರಟಿತು ಸುಗ್ರೀವನಾಜ್ಞೆ
ಕಪಿವರರೆಲ್ಲರು ಕಲಶದ ಸಹಿತದಿ
ಗಗನಕೆ ಹಾರುತ ಹೋದರು ಎಲ್ಲೆಡೆ ‖ ೬೭೩ ‖

ಭಾರತ ದೇಶದ ನದನದಿಯಲ್ಲಿಯು
ಅಲ್ಲದೆ ಸಾಗರಗಳಲ್ಲಿಯು ನೀರು
ಬಂದಿತು ಜಲವದು ತುಂಬಿದ ಕಲಶದಿ
ವಶಿಷ್ಠ ಋಷಿಗಳು ಎದ್ದರು ನಗುತಲಿ ॥ ೬೭೪ ॥

**ಶ್ರೀರಾಮನ ಪಟ್ಟಾಭಿಷೇಕ :**

ಬ್ರಾಹ್ಮಣರೆಲ್ಲರು ಋಷಿಮುನಿ ಶ್ರೇಷ್ಠರು
ಅಲ್ಲದೆ ಇದ್ದರು ವಶಿಷ್ಠ ಕಾಶ್ಯಪ
ಜಾಬಾಲಿ ವಿಜಯ ವಾಮದೇವರೂ
ಗೌತಮ ಸುಯಜ್ಞ ಕಾತ್ಯಾಯನರೂ ॥ ೬೭೫ ॥

ಋಷಿಗಳು ಎಲ್ಲರು ಅಭಿಷೇಕಗೈದು
ಸರಿದರು ಹಿಂದಕೆ ನಂತರ ಬಂದರು
ಕನ್ಯೆಯರಲ್ಲದೆ ಸಚಿವರು ಯೋಧರು
ವಣಿಕಪುತ್ರರೂ ದೇವತೆ ಜನರೂ ॥ ೬೭೬ ॥

ಎಲ್ಲರು ಗೈಯುತ ಅಭಿಷೇಕವನು
ನಂತರ ತಂದರು ನವರತ್ನ ಖಚಿತ
ಸಿಂಹಾಸನವನು ಸಡಗರದಿಂದಲಿ
ವಶಿಷ್ಠ ಗುರುವರ ಕರೆಯುತ ರಾಮನ ॥ ೬೭೭ ॥

ಸಿಂಹಾಸನದಲಿ ಕೂಡಿಸಿ ಅವನನು
ಶಿರದಲಿ ಇಟ್ಟರು ದಿವ್ಯ ಕಿರೀಟವ
ಬ್ರಹ್ಮದೇವನಿಂ ನಿರ್ಮಿತವಾದುದು
ಮನುಚಕ್ರವರ್ತಿ ಧರಿಸಿದ ಕಿರೀಟ ॥ ೬೭೮ ॥

ಅಲ್ಲದೆ ಮನುವಿನ ವಂಶಜರೆಲ್ಲರು
ಧರಿಸಿದ ಕಿರೀಟವಿದ್ದಿತು ಅದುವೇ
ಚಿನ್ನದಿ ರನ್ನದಿ ಕೆತ್ತಿದ ಕಿರೀಟ
ಹೊಳೆಯುತಲಿದ್ದಿತು ಬೆಳಕನು ಬೀರುತ || ೬೭೯ ||

ವಾಯುವು ಕೊಟ್ಟನು ಮುತ್ತಿನ ಹಾರವ
ಮಧ್ಯದಿ ಇದ್ದಿತು ನಾಯಕ ಮಣಿಯು
ಗಂಧರ್ವರಾಗ ಹಾಡುತಲಿದ್ದರು
ಕುಣಿದರು ಆಗಲೆ ಅಪ್ಸರೆಯರೆಲ್ಲರು || ೬೮೦ ||

ಪುರುಷೋತ್ತಮನಿಹ ರಾಮನು ಆಗಲೆ
ದಾನವ ಮಾಡಿದ ಕರೆಯುವ ಹಸುಗಳ
ಹಯಗಳ ಕೂಡಾ ಲಕ್ಷಲಕ್ಷದಲಿ
ಮೂವತ್ತು ಕೋಟಿ ಚಿನ್ನದ ನಾಣ್ಯವ || ೬೮೧ ||

ಬಹು ಬಹು ರೀತಿಯ ವಸ್ತ್ರ ಒಡವೆಗಳ
ಕೊಟ್ಟನು ದ್ವಿಜರಿಗೆ ಪೌರರಿಗೂ ಸಹ
ಕಾಂಚನಮಾಲೆಯ ಸುಗ್ರೀವಗಿತ್ತ
ಅಂಗದ ಪಡೆದನು ಭುಜಕೀರ್ತಿಗಳನು || ೬೮೨ ||

ಹಾಲಿನ ಬಣ್ಣದ ಮುತ್ತಿನ ಸರವನು
ಅಲ್ಲದೆ ಚಂದ್ರನ ಕಿರಣದ ಬಣ್ಣದ
ಸೀರೆಗಳೆರಡನು ಕೊಟ್ಟನು ಸೀತೆಗೆ
ಜಾನಕಿ ಪಡೆಯುತ ಹಾರವ ಕೈಯಲಿ || ೬೮೩ ||

ಪತಿಯನು ನೋಡುತ ವಾನರ ಕಡೆಗೂ
ನೋಡುತ ನಿಂತಳು ಏನೂ ಅನ್ನದೆ
ರಾಮನು ತಿಳಿಯುತ ಸೀತೆಯ ಇಂಗಿತ
ಅಂದನು ಅವಳಿಗೆ ಜಾನಕಿದೇವಿಯೆ ॥ ೬೮೪ ॥

ತೇಜವು ಧೈರ್ಯವು ದಕ್ಷತೆ ವಿನಯವು
ಅಲ್ಲದೆ ಯಶಸ್ಸು ಸಾಮರ್ಥ್ಯ ಬುದ್ಧಿ
ಪೌರುಷವಲ್ಲದೆ ಪರಾಕ್ರಮ ಕೂಡ
ಯಾರಲಿ ಇವೆಯೋ ಅವನಿಗೆ ಕೊಡು ನೀ ॥ ೬೮೫ ॥

**ಸೀತೆಯಿಂದ ಹನುಮಂತನಿಗೆ ಮುತ್ತಿನಹಾರ :**

ಎನ್ನಲು ಸೀತೆಯು ಕರೆಯುತ ಹನುಮನ
ಕೊಟ್ಟಳು ಮುಕ್ತಾಹಾರವ ಅವನಿಗೆ
ಸಂತಸದಿಂದಲಿ ಹನುಮನು ಪಡೆಯುತ
ನಲಿದನು ಆಗಲೆ ಕೊರಳಲಿ ಧರಿಸುತ ॥ ೬೮೬ ॥

ನಂತರ ರಾಮನು ಕಪಿವರರೆಲ್ಲರ
ಗೌರವ ಮಾಡುತ ಕಾಣಿಕೆ ಕೊಟ್ಟನು
ವಿಭೀಷಣ ಕೂಡ ಸಚಿವರ ಸಮೇತ
ಪಡೆದನು ಕಾಣಿಕೆ ವಜ್ರ ವೈಡೂರ್ಯ ॥ ೬೮೭ ॥

ನಲಿದರು ಎಲ್ಲರು ಸಂತಸದಿಂದಲಿ
ಸಂಭ್ರಮ ನಡೆಯಿತು ತಿಂಗಳು ತಿಂಗಳು
ನಂತರ ಎಲ್ಲರು ಅಪ್ಪಣೆ ಪಡೆಯುತ
ನಡೆದರು ತಮ್ಮಯ ತಾಣಕೆ ರಾಜ್ಯಕೆ ॥ ೬೮೮ ॥

ರಾಮನು ಕರೆಯುತ ಲಕ್ಷ್ಮಣನನ್ನು
ಅಂದನು ಅವನಿಗೆ ಲಕ್ಷ್ಮಣ ಕೇಳೈ
ರಾಜ್ಯವು ಇದುವೇ ಪೂರ್ವಜ ಪಾಲಿತ
ನೆರವನು ನೀಡೈ ಆಳಲು ಎನಗೆ || ೬೮೯ ||

ಕಾರಣ ನೀನೇ ಯುವರಾಜನಾಗಿ
ಎನ್ನಯ ಜೊತೆಗೇ ರಾಜ್ಯವ ಆಳು
ಲಕ್ಷ್ಮಣನೆಂದನು ಆಗದು ಎಂದಿಗು
ನಿನ್ನಯ ಸೇವೆಯೆ ಎನ್ನಯ ಭಾಗ್ಯವು || ೬೯೦ ||

ಯುವರಾಜನಂತೂ ಆಗೆನು ಎಂದಿಗು
ಎನ್ನಲು ರಾಮನು ಹೇಳಿದ ಬಹು ಪರಿ
ಆದರು ಲಕ್ಷ್ಮಣ ಒಪ್ಪನು ಆಗಲು
ಕೊನೆಯಲಿ ಕರೆಯುತ ಭರತನ ರಾಮನು || ೬೯೧ ||

ಕೊಟ್ಟನು ಅವನಿಗೆ ಯುವರಾಜ ಪದವಿಯ
ಅಣ್ಣನ ಮಾತಿಗೆ ಒಪ್ಪುತ ಆತನು
ಯುವರಾಜನಾಗಿ ಆಳಿದ ಅವನೂ
ಸಂತಸ ಉಕ್ಕಿತು ರಾಮರಾಜ್ಯದಲಿ || ೬೯೨ ||

ರಾಮನು ಮಾಡಿದ ಯಾಗಗಳನೇಕ
ಪೌಂಡರೀಕ, ವಾಜಪೇಯ, ಅಲ್ಲದೆ
ಅಶ್ವಮೇಧ ಶತಸಾವಿರ ವರ್ಷದಿ
ಇಂತೆಯೆ ಕಳೆಯಿತು ರಾಮರಾಜ್ಯವು || ೬೯೩ ||

ಸಂತಸ ಸಮೃದ್ಧಿ ತುಂಬಿತು ಆಗ
ದುಃಖದ ಬಾಗಿಲು ಮುಚ್ಚಿತು ಬೇಗ
ಹನ್ನೊಂದು ಸಾವಿರ ವರ್ಷಗಳ ಕಾಲ
ರಾಮನು ಆಳಿದ ಕೋಸಲ ದೇಶವ || ೬೯೪ ||

ಕೊಟ್ಟಿಹ ಮಾತನು ಪಾಲಿಸಲೆಂದೇ
ಜನತೆಯ ಹಿತವೇ ಎಲ್ಲಕು ಹಿರಿದು
ಸ್ವಂತದ ಸುಖವದು ಲೆಕ್ಕಕೆ ಇಲ್ಲವು
ಎನ್ನುವ ನೀತಿಯು ರಾಮನ ಜೀವನ || ೬೯೫ ||

ಪಾವನ ನಾಮವು ರಾಮನ ನಾಮವು
ರಾಜನೆ ಇದ್ದರು ಯೋಗಿಯ ಜೀವನ
ಇಂತಹ ಪಾವನ ರಾಮನ ನಾಮವು
ಹರಸಲಿ ಎಮ್ಮಯ ಎಲ್ಲರ ನಡತೆಯ || ೬೯೬ ||



# ತಪ್ಪು—ಒಪ್ಪೋಲೆ

| ಪುಟ | ಶ್ಲೋಕ | ಸಾಲು | ತಪ್ಪು | ಒಪ್ಪು |
|---|---|---|---|---|
| ೧೬ | ೬೭ | ೩ | ತೀಷ್ಣದ | ತೀಕ್ಷ್ಣದ |
| ೩೫ | ೧೬೧ | ೨ | ತಡೆವನು | ತಡೆದರು |
| ೩೭ | ೧೭೧ | ೨ | ಕೂಡಪೆ | ಕೂಡಲೆ |
| ೪೦ | ೧೮೫ | ೨ | ಮು ಸುವೆ | ಮುಗಿಸುವೆ |
| ೫೧ | ೨೩೯ | ೩ | ಈಗಿದ | ಇಂದಿನ |
| ೫೩ | ೨೫೧ | ೧ | ನಡೆದದು | ನಡೆದನು |
| ೫೬ | ೨೬೭ | ೩ | ಸಗುಣಸು | ಸುಗುಣೆಯು |
| ೬೪ | ೩೦೮ | ೩ | ಹನುಸುನ | ಹನುಮನ |
| ೭೦ | ೩೩೭ | ೨ | ರಕ್ಕರ | ರಕ್ಕಸ |
| ೮೨ | ೩೯೫ | ೧ | ಸುಷೇಣನಾಗಲಿ | ಸುಷೇಣನಾಗಲೆ |
| ೧೨೧ | ೫೯೦ | ೩ | ಅವಂಗೆ | ಅವರಿಗೆ |
| ೧೩೦ | ೩೭ | ೪ | ಯೋವುಗ್ಯ | ಸುಯೋಗ್ಯ |

# ಲೇಖಕರ-ಪರಿಚಯ

(ಶ್ರೀ ನಾರಾಯಣರಾವ ತಾಳೀಕೋಟಿ)

ಮಾನವನ ಅಂತರಂಗ-ಬಹಿರಂಗಗಳ ಬಣ್ಣ ಒಂದೇ ಆದಾಗ ಅವನೋರ್ವ ಸಾಧಕನಾಗಿ, ಸಿದ್ಧನಾಗಿ ಸಮಾಜಕಲ್ಯಾಣಕಾರ್ಯದಲ್ಲಿ ನಿರತನಾಗಿ ಯಶಸ್ವಿಯಾಗುತ್ತಾನೆ. ಅಂತಹ ಸಿದ್ಧಪುರುಷನೇ ನಿಜವಾದ ಕವಿ. ಶ್ರೀಮಾನ್ ನಾರಾಯಣರಾಯರು ಇಂತಹ ಶ್ರೇಷ್ಠ ಕವಿಗಳಲ್ಲಿ ಒಬ್ಬರು.

"ಮೋಹಮುದ್ಗರ" ಹಾಗೂ "ರಾಮಾಯಣ ಸುಧೆ" ಎಂಬ ಕೃತಿಗಳು ಇವರ ದಾರ್ಶನಿಕತೆಗೆ ಕನ್ನಡಿ ಹಿಡಿಯುವಂತಿವೆ. ಶ್ರೀ ಶ್ರೀ ಚೆನ್ನಬಸವಸ್ವಾಮಿಗಳ ಪ್ರಣವನಾದ ಕೃತಿಯ ಇವರ ಇಂಗ್ಲೀಷ ಅನುವಾದವು ವಚನಸಾಹಿತ್ಯಕ್ಕೊಂದು ಕೊಡುಗೆ ಎಂದೇ ಹೇಳಬೇಕು.

ಆರ್ಯಸ್ತ್ರೀ ಸೀತಾಮಾತೆ, ಯಾಜ್ಞವಲ್ಕ್ಯ ಹಾಗೂ ಮಾಸತಿಕಲ್ಲು ಇವರ ಐತಿಹಾಸಿಕ ಸಂಶೋಧನೆಯ ಅಮೃತ-ಫಲಗಳು. ಮಕ್ಕಳಿಗಾಗಿ ಬರೆದ ಚಿಕ್ಕ ಹೊತ್ತಿಗೆ "ಬಭ್ರುವಾಹನ" ಶಿಶುವೃಂದಕ್ಕೆ ನಲಿವನ್ನುಂಟು ಮಾಡಿದೆ. ಇವರ ಪ್ರಥಮ ಕಾಣಿಕೆ "ರಾಗಿಣಿ" ಕವನಸಂಕಲನವು ಸಾಮಾಜಿಕ, ರಾಜಕೀಯ ಲೋಪದೋಷಗಳನ್ನೆತ್ತಿ ತೋರಿಸಿ ಮಾರ್ಗದರ್ಶನ ಮಾಡುತ್ತದೆ.

'ಸುಕುಮಾರ' ಎಂಬ ಕಾದಂಬರಿ ಸಮಾಜದ ಹಲವು ಮುಖಗಳ ಪರಿಚಯವೀಯುತ್ತದೆ. ಓರ್ವ ದಲಿತನು ಸ್ವಪ್ರಯತ್ನದಿಂದ ನಿಷ್ಠೆಯಿಂದ ಮಹಾವ್ಯಕ್ತಿ ಆಗಬಲ್ಲನೆಂಬ ವಿಶ್ವಸತ್ಯವನ್ನು ಪ್ರತಿಪಾದಿಸಲಾಗಿದೆ.

ಇವರ ಕನ್ನಡ ಭಗವದ್ಗೀತೆ ಪಂಡಿತ-ಪಾಮರರೀರ್ವರನ್ನು ಕೃತಾರ್ಥಗೊಳಿಸಿದೆ. ವಾಲ್ಮೀಕಿ ರಾಮಾಯಣ, ವ್ಯಾಸ ಭಾರತಗಳೆರಡನ್ನೂ ಕನ್ನಡಕ್ಕೆ ತರಬೇಕೆಂಬ ಇವರ ಆಶೆ ಆಂಶಿಕವಾಗಿ ಈಡೇರಿದೆ ರಾಮಾಯಣದ ನಾಲ್ಕು ಸಂಪುಟಗಳು ಓದುಗರಿಂದ ಪ್ರಶಂಸಿತವಾಗಿವೆ.

ನುಡಿದಂತೆ ನಡೆ, ನಡೆ-ನುಡಿಗಳಂತೆ ಸಾಹಿತ್ಯ-ಸೃಷ್ಟಿ ಎಲ್ಲವೂ ಶುದ್ಧ ಸಾತ್ವಿಕ, "ನಾನೃಷಿ ಕುರುತೆ ಕಾವ್ಯಂ" ಕಾವ್ಯಶ್ರೀ ವರಪಡೆದ ಇವರು ಧನ್ಯರು. ಕನ್ನಡಮ್ಮ ಧನ್ಯಳು, ನಾವೆಲ್ಲ ಧನ್ಯರು —

ವ್ಹಿ. ಎಸ್. ಕಾಂತನವರ
ಸಂಚಾಲಕ, ರವೀಂದ್ರ ಪ್ರಕಾಶನ